

# ಮಿತ್ರಭೇದ

## ೧೮

**ಸಂ**ಜೀವಕನ ಮಾತು ಕೇಳಿ ದಮನಕ ನರಿ ತನ್ನ ಮನಸ್ಸಿನಲ್ಲಿ ಆಲೋಚನೆ ಮಾಡತೊಡಗಿತು: "ಈ ಎತ್ತಿಗೆ ತುಂಬ ಬಲವಿರುವ ಹಾಗೆ ಕಾಣುತ್ತದೆ. ಕೊಂಬುಗಳು ಬಲಿಷ್ಠವಾಗಿ ಭಯ ಹುಟ್ಟಿಸುವಂತಿವೆ. ವಿಧಿ ಹೇಗಿರುವುದೋ ಯಾರಿಗೆ ಗೊತ್ತು? ಇವನು ಈ ಕೊಂಬುಗಳಿಂದ ತಿವಿದು ನನ್ನ ಯಜಮಾನನನ್ನು ಕೊಂದರೂ ಕೊಲ್ಲಬಹುದು. ಎಂದಿಗೂ ಹಾಗಾಗಲು ಬಿಡಬಾರದು. ಆದರಿಂದ ನಮಗೇನೂ ಪ್ರಯೋಜನ ವಿಲ್ಲ. ಆದುದರಿಂದ ಇವನ ಮನಸ್ಸು ಯುದ್ಧದ ಮೇಲಿನಿಂದ ಹಿಂದಿರುಗುವಂತೆ ಮಾಡುವುದೇ ಲೇಸು"

ಹೀಗೆಂದುಕೊಂಡು ದಮನಕವು ಸಂಜೀವಕನನ್ನು ಕುರಿತು, "ಮಿತ್ರನೇ, ಜಗಳಕ್ಕೆ ಇಳಿದುಬಿಡುವುದು ದೊಡ್ಡ ವಿಷಯವಲ್ಲ; ಜಗಳಕ್ಕೆ ಇಳಿಯುವ ಮೊದಲು ಇದಿರಾಳಿಯ ಬಲವನ್ನು ಕುರಿತು ಲೆಕ್ಕ ಹಾಕಿಕೊಳ್ಳಬೇಕು. ಹಾಗೆ ಮಾಡದೆ ಒಮ್ಮೆಗೇ ಯುದ್ಧಕ್ಕೆ ಇಳಿದರೆ ಲಾಭವಾಗದು. ನಿನ್ನಂತಹ ಎತ್ತು ಅರಣ್ಯ ರಾಜನೊಂದಿಗೆ ಯುದ್ಧ ಮಾಡಿ ಗೆಲ್ಲುವುದು ಸಾಧ್ಯವೇ? ಅದಕ್ಕೆ ನಿನಗೆ ಬಲವಂತರ ಸಹಾಯ ಇರಬೇಕಾದೀತು. ಹಿಂದೆ ಸಾಧಾರಣ ಪಕ್ಷಿಯಾದ ಟಿಟ್ಟಿಭವು ಹಾಗೆ ಸಹಾಯ ಪಡೆದುದರಿಂದಲ್ಲವೇ ಅಪಾರವಾದ ಸಮುದ್ರವನ್ನು ಗೆಲ್ಲಲು ಸಾಧ್ಯವಾಯಿತು?" ಎಂದಿತು.

"ಅದೇನು ಕಥೆ?" ಎಂದು ಸಂಜೀವಕನು ಕೇಳಲು, ದಮನಕ ನರಿ ಹೀಗೆಂದಿತು:

### ಸಮುದ್ರವನ್ನು ಜಯಿಸಿದ ಟಿಟ್ಟಿಭ

ಹಿಂದೆ ಮಹಾಸಮುದ್ರದ ತೀರದಲ್ಲಿ ಟಿಟ್ಟಿಭ ಪಕ್ಷಿಗಳ ಜೋಡಿಯೊಂದಿತ್ತು. ಹೆಣ್ಣು ಟಿಟ್ಟಿಭ ಗರ್ಭಿಣಿಯಾಯಿತು. ಅದು ಮೊಟ್ಟೆಯಿಡಲು ಒಳ್ಳೆಯ ಸ್ಥಳ ನೋಡುವಂತೆ ಗಂಡನಿಗೆ ಹೇಳಿತು.

"ಸಮುದ್ರ ಮೊದಲಿನಂತಿಲ್ಲ. ಬಹಳ ಹತ್ತಿರ ವಿದೆ. ಅದಕ್ಕೆ ಆಗಾಗ ಉಬ್ಬರ ಬೇರೆ ಬರುತ್ತದೆ. ಆ ಸಮಯದಲ್ಲಿ ನನ್ನ ಮೊಟ್ಟೆಗಳನ್ನೆಲ್ಲ ಸಮುದ್ರ ಹೊಡೆದುಕೊಂಡು ಹೋಗಿ ನುಂಗಿಬಿಡುತ್ತದೆ" ಎಂದಿತು ಹೆಣ್ಣು ಟಿಟ್ಟಿಭ ಹಕ್ಕಿ.

"ಹುಚ್ಚಳೇ, ಸಮುದ್ರವು ಅಷ್ಟು ಅನ್ಯಾಯಕ್ಕೆ ಸಾಹಸ ಮಾಡಲಾರದು. ಅದಕ್ಕೆ ನನ್ನ ಶಕ್ತಿ ಗೊತ್ತು,

ಹಿಂಬದಿಯ ಚಿತ್ರಕಥೆ

ಎಷ್ಟೋ ಮೀನುಗಳೂ, ಮೊಸಳೆಗಳೂ, ಆಮೆಗಳೂ, ಇತರ ಪ್ರಾಣಿಗಳೂ ತನ್ನಲ್ಲಿ ಸುಖವಾಗಿ ಜೀವಿಸಿಕೊಂಡಿರುವಾಗ, ಸಮುದ್ರವು ನಮ್ಮ ಮೊಟ್ಟೆಗಳನ್ನು ನುಂಗುವಂಥ ಹೀನವಾದ ಕೆಲಸ ಮಾಡಬಲ್ಲುದೇ ?'' ಎಂದಿತು ಗಂಡು ಹಕ್ಕಿ.

ಹೆಣ್ಣು ಹಕ್ಕಿಗೆ ತನ್ನ ಗಂಡನ ಸಾಮರ್ಥ್ಯ ಗೊತ್ತಿದ್ದುದರಿಂದ, ''ಸಾಕು ಬಿಡು. ಹೀಗೆ ಜಂಬ ಹೊಡೆದುಕೊಂಡು ಅಪಹಾಸ್ಯಕ್ಕೆ ಗುರಿಯಾಗಬೇಡ. ನಿನಗಿರುವ ಬಲವೆಷ್ಟೆಂಬುದು ನನಗೆ ಗೊತ್ತಿಲ್ಲವೇನು ? ತನ್ನ ವಾಚಾಲತ್ವದಿಂದಲ್ಲವೇ ಆಮೆಯೊಂದು ನಾಶವಾಯಿತು ?'' ಎಂದಿತು.

''ಯಾವ ಆಮೆ ? ಏನು ಕಥೆಯದು ? ನನಗೆ ಗೊತ್ತಿಲ್ಲವಲ್ಲ ?'' ಎಂದು ಗಂಡು ಹಕ್ಕಿ ಹೇಳಲು, ''ಹಾಗಾದರೆ ಕೇಳು'' ಎಂದು ಹೆಣ್ಣು ಹಕ್ಕಿ ಆಮೆಯ ಕಥೆಯನ್ನು ಹೇಳತೊಡಗಿತು:

ಒಂದು ಕೆರೆಯಲ್ಲಿ ಕಂಬುಗ್ರೀವ ಎಂಬ ಆಮೆ ಇತ್ತು. ಸಂಕಟ, ವಿಕಟ ಎಂಬ ಎರಡು ಕೊಕ್ಕರೆಗಳು ಅದರೊಂದಿಗೆ ತುಂಬ ಸ್ನೇಹವಾಗಿದ್ದುವು. ಹೀಗಿರುವಾಗ ಒಂದುಸಾರಿ ಮಳೆ ಕಡಮೆಯಾಗಿ ನೀರಿಗೆ ಬರ ಬಂದಿತು. ಆ ಕೆರೆ ಒಣಗತೊಡಗಿತು. ಆದುದರಿಂದ ಕೊಕ್ಕರೆಗಳು ಬೇರೊಂದು ಒಳ್ಳೆಯ ಕೆರೆಗೆ ಹೋಗಲು ಆಲೋಚನೆ ಮಾಡಿ, ಆ ಸಂಗತಿಯನ್ನು ತಮ್ಮ ಮಿತ್ರ ಆಮೆಯೊಂದಿಗೆ ಹೇಳಿದುವು.

''ನಿಮಗಿಂತಲೂ ನಾನು ಹೆಚ್ಚಿನ ನೀರಿನಲ್ಲಿ ಜೀವಿಸುವವನು. ನೀರಿಲ್ಲದಿದ್ದರೆ ನಾನು ಬದುಕಲಾರೆ. ನೀವು ಹೇಗಾದರೂ ಮಾಡಿ ನನ್ನನ್ನು ಕೂಡಾ ಇಲ್ಲಿಂದ ಕರೆದುಕೊಂಡು ಹೋಗಬೇಕು. ಏನಾದರೂ ಉಪಾಯ ಮಾಡಿರಪ್ಪ'' ಎಂದು ಆಮೆ ಕೊಕ್ಕರೆಗಳೊಡನೆ ಕೇಳಿಕೊಂಡಿತು.

''ನೀನು ನಮ್ಮ ಹಾಗೆ ಹಾರಲಾರೆಯಲ್ಲಾ ? ನಾವೇನು ಮಾಡಬಹುದು ? ವಿಧಿ ಹಣೆಯಲ್ಲಿ



ಬರೆದ ಹಾಗೆ ಆಗುತ್ತದೆಂದು ಕೊಳ್ಳಬೇಕು. ಬೇರೆ ಉಪಾಯವೇನಿದೆ ?'' ಎಂದುವು ಕೊಕ್ಕರೆಗಳು.

''ಮಿತ್ರರೇ, ಒಮ್ಮೆಲೇ ಹೀಗೆ ನಿರಾಶೆ ಮಾಡಿದರೆ ಹೇಗೆ ? ಧೈರ್ಯವಿರುವವರಿಗೆ ಏನೋ ಒಂದು ಉಪಾಯ ಹೊಳೆಯುತ್ತದೆ. ವಿವೇಕವುಳ್ಳವರು ತಮ್ಮ ಆಪ್ತರನ್ನು ಕಾಪಾಡಲು ಪ್ರಯತ್ನ ಮಾಡಬೇಕೆಂದು ಮನುಧರ್ಮಶಾಸ್ತ್ರವು ಹೇಳುತ್ತದಂತೆ'' ಎಂದಿತು ಆಮೆ.

ಮೂರೂ ಸ್ವಲ್ಪ ಹೊತ್ತು ಆಲೋಚನೆ ಮಾಡುವಾಗ, ಆಮೆಗೇ ಒಂದು ಉಪಾಯ ತೋರಿತು. ಅದು ಒಂದು ಕೋಲನ್ನು ತಂದು ಅದನ್ನು ಕೊಕ್ಕರೆಗಳು ಎರಡು ಕೊನೆಗಳಲ್ಲಿ ಕಚ್ಚಿ ಹಿಡಿದುಕೊಂಡರೆ, ತಾನು ಅದರ ಮಧ್ಯಭಾಗವನ್ನು ಬಾಯಿಯಿಂದ ಹಿಡಿದುಕೊಳ್ಳುವೆನೆಂದಿತು.

ಈ ಪದ್ಧತಿಯಿಂದ ಆಕಾಶದಲ್ಲಿ ಹಾರುವುದು ಬಹಳ ಅಪಾಯವೆಂದೂ, ದಾರಿಯಲ್ಲಿ ಆಮೆ ಮಾತಾ

ಡಲು ಪ್ರಯತ್ನಿಸಿದರೆ ಪ್ರಾಣವೇ ಹೋಗುವುದೆಂದೂ ಕೊಕ್ಕರೆಗಳು ಹೇಳಿದುವು. ದಾರಿಯಲ್ಲಿ ತಾನು ಬಾಯಿ ಬಿಡಲಾರೆನೆಂದು ಆಮೆ ಪ್ರಮಾಣ ಮಾಡಿ ಹೇಳಿತು. ಅದರಂತೆ ಆಮೆ ಆ ಕೋಲಿನ ಮಧ್ಯ ಭಾಗವನ್ನು ಕಚ್ಚಿ ಹಿಡಿದ ಮೇಲೆ, ಕೊಕ್ಕರೆಗಳೆರಡೂ ಕೋಲಿನ ಎರಡು ತುದಿಗಳನ್ನೂ ಕಚ್ಚಿಕೊಂಡು ಆಕಾಶದಲ್ಲಿ ಹಾರಿದುವು. ತುಂಬ ಎತ್ತರದಲ್ಲಿ ಹಾರಿದರೆ ಅಪಾಯವಾಗಬಹುದೆಂದು, ಸ್ವಲ್ಪ ಎತ್ತರದಲ್ಲಿಯೇ ಹಾರುತ್ತಾ ಸಾಗ ತೊಡಗಿದುವು.

ಹಾಗೆ ಅವು ಒಂದು ಊರಿನ ಮೇಲು ಭಾಗದಲ್ಲಿ ಹೋಗುತ್ತಿರುವಾಗ, ಗ್ರಾಮಸ್ಥರು ಅವುಗಳನ್ನು ನೋಡಿ, ಕೊಕ್ಕರೆಗಳನ್ನೂ ಆಮೆಯನ್ನೂ ಹಾಸ್ಯ ಮಾಡತೊಡಗಿದರು. ಅದನ್ನು ಕೇಳಿ ಆಮೆಗೆ ಕೋಪ ಬಂದು, "ಈ ಮನುಷ್ಯರಿಗೆ ಬುದ್ಧಿಯಿಲ್ಲವೇನು ?" ಎಂದು ಹೇಳಲು ಬಾಯಿ ತೆರೆಯಿತು. ಆದರ ಮಾತು ಪೂರ್ತಿ ಯಾಗುವುದರೊಳಗೇ ನೆಲಕ್ಕೆ ಬಿದ್ದುಬಿಟ್ಟಿತು. ಕೂಡಲೇ ಗ್ರಾಮಸ್ಥರು ಅದನ್ನು ಹಿಡಿದುಕೊಂಡು ಕೊಂದು ತಿಂದುಬಿಟ್ಟರು.

ಹೆಣ್ಣು ಟಿಟ್ಟಿಭವು ಗಂಡನಿಗೆ ಈ ಕಥೆ ಹೇಳಿ, ಮತ್ತೆ ಹೀಗೆ ಹೇಳಿತು : "ಅರಣ್ಯದ ಮಧ್ಯದಲ್ಲಿದ್ದ ಒಂದು ಮಡುವಿನಲ್ಲಿ ಅನಾಗತ ವಿಧಾತ, ಪ್ರತ್ಯುತ್ಪನ್ನ ಮತಿ, ಯದ್ಭವಿಷ್ಯತಿ ಎಂಬ ಮೂರು ದೊಡ್ಡ ದೊಡ್ಡ ಮೀನುಗಳು ಸ್ನೇಹದಿಂದಿದ್ದುವು. ಒಂದುದಿನ ಕೆಲವರು ಬೆಸ್ತರು ಆ ಮಡುವಿನ ಬದಿಯಿಂದಾಗಿ ಹೋಗುತ್ತ, "ಈ ಮಡುವಿನಲ್ಲಿ ದೊಡ್ಡ ದೊಡ್ಡ ಮೀನುಗಳಿವೆ, ನಾಳೆ ಬಂದು ಹಿಡಿಯುವ' ಎಂದು ಮಾತಾಡಿಕೊಂಡುದನ್ನು ಅನಾಗತವಿಧಾತವು ಕೇಳಿತು. ಅದು ತಳಮಳಿಸುತ್ತ ತನ್ನ ಮಿತ್ರರನ್ನು ಕರೆದು, ಅದನ್ನು ಹೇಳಿ, 'ನಾವು ಇನ್ನೊಂದು ಮಡುವಿಗೆ ಹೋಗಿಬಿಡಬೇಕು' ಎಂದಿತು.

"ಪ್ರತ್ಯುತ್ಪನ್ನ ಮತಿ ನಕ್ಕು 'ನಾಳೆ ಬರುವ ಮಾತಿಗೆ ಮುಂದಾಗಿ ಹೆದರಿಕೊಳ್ಳುವುದೇಕೆ ? ನಾನಿಲ್ಲಿ ಬಹಳ ಕಾಲದಿಂದ ಸುಖವಾಗಿದ್ದೇನೆ. ಎಷ್ಟೋ ಅಪಾಯಗಳನ್ನು ಉಪಾಯದಿಂದ ತಪ್ಪಿಸಿಕೊಂಡಿದ್ದೇನೆ. ಬೆಸ್ತರು ಬಂದು ಬಲೆ ಬೀಸಲಾರರು. ಬೀಸಿದರೂ ಉಪಾಯದಿಂದ ತಪ್ಪಿಸಿಕೊಂಡೇನು' ಎಂದಿತು. ಯದ್ಭವಿಷ್ಯತಿ ಕೂಡಾ 'ನನಗೂ ಇಲ್ಲಿಂದ ಹೊರಡುವ ಮನಸ್ಸಿಲ್ಲ. ಬೇರೆಲ್ಲಿಯೂ ಮೀನುಗಳೇ ಇಲ್ಲವೆ ? ಅವರು ಈ ಕಾಡಿನ ನಡುವಿಗೇ ಬರುತ್ತಾರೇನು ? ಒಂದುವೇಳೆ ಹೀಗೆಯೇ ನಡೆಯಬೇಕೆಂದು ಬರೆದಿದ್ದರೆ ಯಾರು ತಪ್ಪಿಸುವರು ?' ಎಂದಿತು. ಇದನ್ನು ಕೇಳಿ ಅನಾಗತವಿಧಾತ, ಮಡುವಿನಿಂದ ಹೊರಡುವ ಸಣ್ಣ ಕಾಲುವೆಯ ಮೂಲಕ ಬೇರೊಂದು ಮಡುವಿಗೆ ಹೊರಟುಹೋಯಿತು.





# ಕಂಡುಹಿಡಿದವನು

ಏನಾದರೂ ಹಿಡಿದ ಪಟ್ಟುಬಿಡದವನಾದ ರಾಜಾ ತ್ರಿವಿಕ್ರಮನು ಮತ್ತೆ ಮರದಬಳಿಗೆ ಹೋಗಿ, ಕೊಂಬೆಯಲ್ಲಿ ನೇತಾಡುತ್ತಿದ್ದ ಶವವನ್ನು ಕೆಳಗಿಳಿಸಿ ಭುಜದ ಮೇಲೆ ಹಾಕಿಕೊಂಡು ಮೌನವಾಗಿ ಸ್ಮಶಾನದ ಕಡೆಗೆ ನಡೆಯ ತೊಡಗಿದನು. ಆಗ ಶವದೊಳಗಿನ ಬೇತಾಳವು ಮಾತಾಡಲು ತೊಡಗಿ, "ಎಲೈ ಮಹಾರಾಜನೇ, ನೀನು ಯಾರಿಗೆ ಏನು ಮಾತುಕೊಟ್ಟು ಹೀಗೆ ಕಷ್ಟಕ್ಕೆ ಸಿಕ್ಕಿದೆಯೋ ತಿಳಿಯದು. ಒಂದೊಂದು ಸಾರಿ ಕೊಟ್ಟ ಮಾತನ್ನು ಕಾಪಾಡಲಿಕ್ಕಾಗಿ ಅಧರ್ಮ ಮಾರ್ಗ ಹಿಡಿಯಬೇಕಾಗಿ ಬಂದರೂ ಬರಬಹುದು. ಇದಕ್ಕೆ ನಿದರ್ಶನವಾಗಿ ವಿಕ್ರಮಸೇನನೆಂಬ ರಾಜನ ಕತೆಯನ್ನು ಹೇಳುತ್ತೇನೆ. ದಾರಿಯ ಶ್ರಮ ತಿಳಿಯದಂತೆ ಕೇಳುತ್ತಾ ನಡೆ" ಎಂದು ಹೀಗೆ ಕಥೆಯನ್ನು ಪ್ರಾರಂಭಮಾಡಿತು:

ಅನೇಕ ವರ್ಷಗಳ ಹಿಂದೆ ಭಾವನಾ ಎಂಬುದೊಂದು ರಾಜ್ಯವಿತ್ತು. ಅದನ್ನು ವಿಕ್ರಮಸೇನನೆಂಬ ರಾಜನು ಪಾಲಿಸಿಕೊಂಡಿದ್ದನು. ಅವನು ರಾಜಧರ್ಮಗಳನ್ನು ಚೆನ್ನಾಗಿ ತಿಳಿದವನು. ರಾಜನೀತಿಗಳನ್ನು ಕಲಿತವನು, ಆದುಧರಿಂದ ರಾಜ್ಯಪಾಲನೆ

ಬೇತಾಳ ಕಥೆಗಳು



ಯಲ್ಲಿ ತುಂಬ ಸಮರ್ಥನಾಗಿದ್ದನು. ಯುದ್ಧದಲ್ಲಿ ಅಪಜಯವನ್ನೇ ಅರಿಯದವನು. ಸುತ್ತುಮುತ್ತಲಿನ ಅನೇಕ ಮಂದಿ ರಾಜರು ಅವನಿಗೆ ಸಾಮಂತರಾದು ದರಿಂದ, ಅಪಾರವಾಗಿ ಕಪ್ಪ ಕಾಣಿಕೆಗಳು ಬರುತ್ತಲೇ ಇದ್ದುವು. ವಿಕ್ರಮಸೇನನ ಖಜಾನೆಯಲ್ಲಿ ಲಕ್ಷ್ಮಿ ನಲಿದಾಡಿಕೊಂಡಿದ್ದಳು.

ಹೀಗಿರುವಾಗ ಸ್ವಲ್ಪ ಕಾಲದ ಮೇಲೆ ರಾಜನ ಖಜಾನೆಯೊಳಗಿನ ಧನರಾಶಿ ದಿನದಿಂದ ದಿನಕ್ಕೆ ಕೊರತೆಯಾಗಿ ಹೋಗುತ್ತಿರುವಂತೆ ಕಾಣಿಸಿತು. ಎಷ್ಟು ಲೆಕ್ಕ ಮಾಡಿ ನೋಡಿದರೂ ಆ ಕೊರತೆಗೆ ಪರಿಹಾರ ಕಾಣಿಸಲಿಲ್ಲ. ಆದುದರಿಂದ ಯಾರೋ ಹೇಗೋ ಉಪಾಯವಾಗಿ ಖಜಾನೆಯೊಳಗೆ ಹೊಕ್ಕು ಕೊಳ್ಳೆ ಹೊಡೆಯುವರೆಂದು ರಾಜನಿಗೆ ಅನು ಮಾನ ಉಂಟಾಯಿತು.

ಆ ಕಳ್ಳತನವನ್ನು ಕಂಡು ಹಿಡಿಯಲು ಬಹಳ ಪ್ರಯತ್ನ ಮಾಡಿದನು. ಕಾವಲುಗಾರರಿಗೆ ತೀವ್ರವಾದ ಆಜ್ಞೆಗಳನ್ನು ಮಾಡಿದನು. ಅದೇನೂ ಉಪಯೋಗವಿಲ್ಲದೆ ಹೋಗಲು ತಾನೇ ಸ್ವತಃ ರಾತ್ರಿಯಲ್ಲಿ ಖಜಾನೆಯ ಸುತ್ತಲೂ ಗಸ್ತಿ ಹೊಡೆದನು. ಆದರೂ ಖಜಾನೆಯೊಳಗಿನ ಧನವು ಕಡಿಮೆಯಾಗುತ್ತಲೇ ಇದ್ದಿತು.

ಕಡೆಗೆ ರಾಜನು ತನ್ನ ಖಜಾನೆಯನ್ನು ಕೊಳ್ಳೆ ಹೊಡೆಯುವ ಕಳ್ಳರನ್ನು ಹಿಡಿದು ಕೊಟ್ಟವರಿಗೆ ತನ್ನ ಕುಮಾರಿಯನ್ನು ಕೊಟ್ಟು ಮದುವೆ ಮಾಡುವೆನೆಂದು ದೇಶದೊಳಗೆಲ್ಲಾ ಡಂಗುರ ಸಾರಿಸಿದನು. ಆಗ ರಾಜ ಕುಮಾರಿಯನ್ನು ಮದುವೆಯಾಗಬೇಕೆಂಬ ಆಸೆಯಿಂದ ಅನೇಕ ಮಂದಿ ಯುವಕರು ಖಜಾನೆಯ ಕಳ್ಳರನ್ನು ಹಿಡಿಯಲು ಪ್ರಯತ್ನಪಟ್ಟರು. ಆದರೆ ಕಳ್ಳ ಸಿಗಲೇ ಇಲ್ಲ. ಇಲಿ ಹೆಗ್ಗಣಗಳ ಕಾಟವಿರಬಹುದೆಂದು ಅದಕ್ಕೂ ತಕ್ಕ ಬಂದೋಬಸ್ತು ಮಾಡಿದನು. ಖಜಾನೆಯಲ್ಲಾಗುವ ಕಳ್ಳತನಗಳು ನಿಂತು ಹೋಗಲೇ ಇಲ್ಲ. ರಾಜನಿಗೆ ಅದೇ ಒಂದು ಚಿಂತೆಯಾಯಿತು.

ಹೀಗಿರುವಾಗ ಒಂದುದಿನ ರಾಜನು ಒಡ್ಡೋಲಗ ನಡೆಯಿಸಿ ಕೊಂಡಿದ್ದಾಗ, ಒಬ್ಬ ಸುಂದರ ಯುವಕನು ರಾಜನನ್ನು ನೋಡಲು ಬಂದು, "ಮಹಾಪ್ರಭುಗಳೇ ನೀವು ಹಾಕಿಸಿದ ಡಂಗುರದ ಸಮಾಚಾರವನ್ನು ಕೇಳಿದೆ. ಆ ಕಳ್ಳನನ್ನು ಹಿಡಿದುಕೊಡಲು ನನಗೆ ಸಾಧ್ಯವಾದೀತೆಂದು ನಂಬಿ ಬಂದಿದ್ದೇನೆ." ಎಂದನು.

"ಒಳ್ಳೆಯದು ಪ್ರಯತ್ನ ಪಡು. ನಿನ್ನೊಂದಿಗೆ ಎಷ್ಟುಮಂದಿ ಸಹಾಯಕ ಭಟರನ್ನಾದರೂ ಕಳು ಹಿಸುತ್ತೇನೆ. ಕಳ್ಳನನ್ನು ಹಿಡಿದು ನನಗೊಪ್ಪಿಸಿದರೆ ನನ್ನ ಕುಮಾರಿಯನ್ನು ನೀನು ಮದುವೆಯಾಗ ಬಹುದು." ಎಂದನು.

"ಮಹಾರಾಜರೇ, ನನಗೆ ಯಾರ ಸಹಾಯವೂ ಅಗತ್ಯವಿಲ್ಲ. ತಾವೇ ಸ್ವಯಂ ಹೊರಟು ನನ್ನ ಜತೆಯಲ್ಲಿ ಗುಡ್ಡದ ಕಡೆಗೆ ಬಂದರೆ ಸಾಕು. ತಮಗೆ ಅಭ್ಯಂತರ

ವೇನಿಲ್ಲದಿದ್ದರೆ ನನ್ನನ್ನು ನಂಬಿ, ನಾನು ಹೇಳಿದ ಸ್ಥಳಕ್ಕೆ ಬರಬಹುದು." ಎಂದ ಆ ಯುವಕ.

ರಾಜನು ಮಹಾ ಧೈರ್ಯ ಶಾಲಿ. ಅವನು ಸ್ವಲ್ಪ ಹೊತ್ತು ಆಲೋಚನೆ ಮಾಡಿ, "ಸರಿ, ಕಳ್ಳ ಸಿಗುವನೆಂಬ ನಂಬುಗೆ ನಿನಗಿದ್ದರೆ ನಾನು ಎಲ್ಲಿಗೆ ಬೇಕಾದರೂ ಬರುತ್ತೇನೆ. ಯಾವಾಗ ಹೊರಡೋಣ ಹೇಳು ?" ಎಂದು ಕೇಳಿದ.

"ಆ ಸಂಗತಿಯನ್ನು ಪುನಃ ಬಂದು ನಾನು ವಿನಂತಿಸಿಕೊಳ್ಳುತ್ತೇನೆ." ಎಂದು ನುಡಿದು ಯುವಕನು ಆ ದಿನ ಸುಮ್ಮನೆ ಹೊರಟುಹೋದನು.

ಮತ್ತೆ ಎರಡು ದಿನಗಳು ಕಳೆದುವು. ಮೂರನೇ ದಿನ ರಾತ್ರಿಯ ವೇಳೆಯಲ್ಲಿ ಅವನು ರಾಜನಬಳಿಗೆ ಬಂದು, "ಈ ರಾತ್ರಿ ನಾವು ವೇಷ ಬದಲಾವಣೆ ಮಾಡಿಕೊಂಡು ಹೊರಡಬೇಕು" ಎಂದನು. ಅದರಂತೆಯೇ ರಾಜನು ಅವನೊಂದಿಗೆ ಹೊರಟನು.

ಸ್ವಲ್ಪ ದೂರ ಪ್ರಯಾಣ ಮಾಡಿ ಅವರಿಬ್ಬರೂ ಅರಣ್ಯ ಪ್ರಾಂತವನ್ನು ತಲಪಿ, ಕಿರು ಗುಡ್ಡಗಳ ನಡುವಿಗೆ ಮುಟ್ಟಿದರು. ಯುವಕನು ರಾಜನೊಂದಿಗೆ ಒಂದು ದೊಡ್ಡ ಬಂಡೆಗಲ್ಲಿನ ಮರೆಯಲ್ಲಿ ಕುಳಿತನು. ಆಗ ಅವನು ಮೆಲ್ಲನಿಯಿಂದ ರಾಜನೊಂದಿಗೆ, "ಮಹಾರಾಜರೆ, ಅಲ್ಲಿ ಕಾಣುವ ಗುಡ್ಡದ ಮೇಲೆ ಒಂದು ದೊಡ್ಡ ಗುಹೆಯಿದೆ. ಅದರಲ್ಲಿ ಕಳ್ಳರು ರಾತ್ರಿಯ ಹೊತ್ತಿನಲ್ಲಿ ಸೇರಿ ಮಧುಪಾನ ಮಾಡಿ ಮೈಮರೆತು ಮತ್ತರಾಗಿ ಹಾಡುತ್ತ ಕುಣಿಯುತ್ತ ಹೊತ್ತು ಕಳೆಯುತ್ತಾರೆ. ಆದರೆ ನಿಮಗೆ ನಾನು ತೋರಿಸುವ ದೃಶ್ಯ ಅದಲ್ಲ." ಎಂದು ಮಾತು ನಿಲ್ಲಿಸಿ ಕಿವಿಗೊಟ್ಟು ಕೇಳ ತೊಡಗಿದನು.

ದೂರದಲ್ಲಿ ಗೆಜ್ಜೆಯ ಸಪ್ಪಳ ತಾನಬದ್ಧವಾಗಿ ಕೇಳ ತೊಡಗಿತು. ಆ ಶಬ್ದ ಸಮೀಪವಾಗಿ ಬರ ತೊಡಗಿತು. ಯುವಕನು ರಾಜನೊಂದಿಗೆ, "ಮಹಾರಾಜರೆ, ಈಗ ಬರುವವಳು ಒಬ್ಬಳು ಯುವತಿ. ಅವಳನ್ನು ಮಾತ್ರ ಚೆನ್ನಾಗಿ ಪರಿಶೀಲಿಸಿ ನೋಡಿ ಗುರುತು ನೆನಪಿಟ್ಟುಕೊಳ್ಳಿರಿ. ಅದು ಮುಖ್ಯ" ಎಂದನು. ಸ್ವಲ್ಪ ಹೊತ್ತಿಗೆ ಆ ದಾರಿಯಾಗಿ ಹದಿನಾರು





ವಯಸ್ಸಿನ ಸುಂದರಿಯಾದ ಹುಡುಗಿಯೊಬ್ಬಳು ಗೆಜ್ಜೆಯ ಸಪ್ಪಳ ಮಾಡುತ್ತಾ, ನಾಟ್ಯದ ನಡಿಗೆಯಿಂದ ನಡೆದುಕೊಂಡು ಆ ದಾರಿಯಾಗಿ ಬಂಧಳು. ಅವಳ ಎರಡು ಬದಿಗಳಲ್ಲಿ ಇಬ್ಬರು ಮನುಷ್ಯರು ದೀವಿಟಿಗೆ ಹಿಡಿದುಕೊಂಡು ನಡೆಯುತ್ತಿದ್ದರು. ಅವಳ ಹಿಂದೆ ಮತ್ತಿಬ್ಬರು ಬಂಟರು ತುಂಬಿದ ಚೀಲವನ್ನು ಭುಜಗಳ ಮೇಲೆ ಹೊತ್ತುಕೊಂಡು ಬರುತ್ತಿದ್ದರು. ರಾಜನೂ ಯುವಕನೂ ನೋಡುತ್ತಿದ್ದ ಹಾಗೆಯೇ ಅವರೆಲ್ಲರೂ ಮುಂದಕ್ಕೆ ಸಾಗಿಹೋದರು.

ಆ ದೃಶ್ಯವನ್ನು ನೋಡಿದ ಕ್ಷಣದಿಂದ ರಾಜನ ತುಟಿಗೆ ಅಂಟು ಸೇರಿದಂತಾಗಿತ್ತು. ಅವರೆಲ್ಲ ಹೊರಟುಹೋಗಿ ಬಹಳ ಹೊತ್ತಾದರೂ ರಾಜನು ಮಾತಾಡದಿರುವುದನ್ನು ನೋಡಿ ಯುವಕನು, "ಮಹಾರಾಜರೆ, ಏನೋ ಗಾಢವಾದ ಆಲೋಚನೆಯಲ್ಲಿವಿರಲ್ಲಾ? ಆ ಯುವತಿಯನ್ನು ಚೆನ್ನಾಗಿ ಗುರುತು ಇಟ್ಟುಕೊಂಡಿರಷ್ಟೆ?" ಎಂದು ಕೇಳಿದ.

ಈಗ ರಾಜನು ಬಾಯಿ ತೆರೆದು ಯುವಕನನ್ನು ನೋಡಿ, "ಇದೆಲ್ಲ ಈ ವಿಧವಾಗಿ ನಡೆಯುತ್ತಿದೆ ಎಂಬ ಸಂಗತಿ ನಿನಗೆ ಹೇಗೆ ತಿಳಿಯಿತು?" ಎಂದು ಕೇಳಿದ.

"ಮಹಾರಾಜರೆ, ನಾನು ಚಿಕ್ಕತನದಿಂದಲೂ ತಂದೆತಾಯಿ ಗುರು ಹಿರಿಯರ ಮಾತನ್ನು ಲಕ್ಷ್ಯ ಮಾಡದೆ, ಯಾವುದಕ್ಕೂ ಹೆದರದೆ ಗುಡ್ಡ ಬೆಟ್ಟ ಕೊಳ್ಳ ಕಣಿವೆಗಳಲ್ಲೆಲ್ಲಾ ಇಷ್ಟಾನುಸಾರವಾಗಿ ತಿರುಗುತ್ತಿದ್ದೆ. ಒಂದುದಿನ ರಾತ್ರಿ ನಾನು ಹೇಳಿದ ಆ ಗುಹೆಯ ಬಳಿಗೆ ಬಂದೆ. ಒಳಗಿನಿಂದ ಕೋಲಾಹಲವಾಗಿ ಶಬ್ದ ಕೇಳಿಸುತ್ತಿದ್ದಿತು. ಗುಹೆಯೊಳಗೆ ಬಗ್ಗಿ ನೋಡಿದೆ. ಒಳಗೆ ದೊಡ್ಡ ದೊಡ್ಡ ಕೊಠಡಿಗಳಿದ್ದುವು. ಒಂದು ಬದಿಯಲ್ಲಿ ಕಾಳಿಯ ವಿಗ್ರಹವಿದ್ದಿತು. ಕಳ್ಳರು ಅದಕ್ಕೆ ಪೂಜೆ ಮಾಡುತ್ತಿದ್ದರು. ಮತ್ತೆ ಕೆಲವರು ಕುಡಿಯುತ್ತಿದ್ದರು. ಎತ್ತರವಾದ ಬಂಡೆಯ ಮೇಲೆ ಕಳ್ಳರ ನಾಯಕನು ಕುಳಿತಿದ್ದ. ಈಗ ನಾವು ನೋಡಿದ ಯುವತಿ ಒಬ್ಬ ಯುವಕನ ಪಕ್ಕದಲ್ಲಿ ಕುಳಿತುಕೊಂಡಿದ್ದಳು. ಅವಳ ಸಮೀಪದಲ್ಲಿ ಧನದ ಮೂಟೆಗಳಿದ್ದುವು. ಅಷ್ಟು ಧನವು ಎಲ್ಲಿಂದ ಬಂತೆಂದು ಆಲೋಚಿಸುವಾಗ ನನಗೆ ಅನುಮಾನವಾಯಿತು. ತಾವು ಹಾಕಿಸಿದ ಡಂಗುರವನ್ನು ಕೇಳಿದ ಮೇಲೆ ಅದು ನಿಮ್ಮ ಖಜಾನೆಯ ಧನವೇ ಇರಬೇಕೆನಿಸಿತು. ಆದುದರಿಂದಲೇ ಈ ದಿನ ನಿಮ್ಮನ್ನು ಕರೆಕೊಂಡು ಬಂದೆ. ಇನ್ನು ಕಳ್ಳರನ್ನು ಹಿಡಿಯಬೇಕಾದ ಭಾರ ತಮ್ಮದು." ಎಂದನು ಯುವಕ. "ನಾವು ನೋಡಿದ ಹುಡುಗಿ ಯಾರೆಂಬುದು ಗೊತ್ತೇನು? ಅವಳು ಬೇರೆ ಯಾರೂ ಅಲ್ಲ; ನನ್ನ ಮಗಳು!" ಎಂದ ರಾಜ.

ಈ ಮಾತು ಕೇಳಿ ಯುವಕನು ಬೆದರಿಬಿದ್ದು, "ಆ! ನಿಜವೇನು? ಈ ಸಂಗತಿ ನನಗೆ ಸ್ವಲ್ಪ ಮಾತ್ರವಾದರೂ ಗೊತ್ತಾಗಿದ್ದರೆ ತಮ್ಮನ್ನು ಇಲ್ಲಿಗೆ ಕರೆದುಕೊಂಡು ಬರುತ್ತಿದ್ದಿಲ್ಲ. ನನಗೇನು ಗೊತ್ತು? ಎಂತಹ ಅನ್ಯಾಯವಾಯಿತು! ತಾವು ನನ್ನನ್ನು ಕ್ಷಮಿಸಬೇಕು"

ಎಂದು ವಿನಯದಿಂದ ಬಾಗಿ ಬೇಡಿಕೊಂಡನು. "ಹುಚ್ಚನೇ, ನೀನೇಕೆ ಚಿಂತೆ ಪಡಬೇಕು? ನನ್ನ ಮಗಳಾದರೂ ಮತ್ತೆ ಯಾರೇ ಆದರೂ ನ್ಯಾಯದಂತೆ ನಡೆಯಲೇಬೇಕು. ನಾಳೆ ಅವಳನ್ನು ಕಠಿನವಾಗಿ ಶಿಕ್ಷೆಗೆ ಗುರಿಪಡಿಸುತ್ತೇನೆ. ನೀನು ನಾಳೆ ನನ್ನ ಸಭಾಭವನಕ್ಕೆ ಬಾ." ಎಂದು ಹೇಳಿ ರಾಜನು ತನ್ನ ಮನೆಗೆ ಹೊರಟುಹೋದನು.

ಅವನು ನೇರಾಗಿ ರಾಜಕುಮಾರಿಯ ಮಂದಿರಕ್ಕೆ ಹೋಗಿ, ಅಲ್ಲಿಯ ಪರಿಚಾರಿಕೆಯರನ್ನು ನೋಡಿ, "ಕುಮಾರಿ ಎಲ್ಲಿ?" ಎಂದು ಕೇಳಿದನು. ಅವರು ಏನೂ ಹೇಳದೆ ಸುಮ್ಮನೆ ಒಬ್ಬರನ್ನೊಬ್ಬರು ಪಿಳಿ ಪಿಳಿ ನೋಡಿ, ಬಳಿಕ ಎಲ್ಲರೂ ಮುಖ ತಗ್ಗಿಸಿ ನಿಂತು ಬಿಟ್ಟರು. ಬೆಳಗಾಗುವವರೆಗೂ ರಾಜನು ಕುಮಾರಿಯ ಮಂದಿರದಲ್ಲೇ ಇದ್ದು, ಬೆಳಂಜಾವದಲ್ಲಿ ಅವಳು ಅಲ್ಲಿಗೆ ಬಂದ ಕೂಡಲೇ, "ರಾತ್ರಿ ಪೂರಾ ಎಲ್ಲಿಗೆ ಹೋಗಿದ್ದೆ?" ಎಂದು ಕೇಳಿದನು. ಅವಳು ಏನೂ ಹೇಳದೆ ತಲೆ ಬಗ್ಗಿಸಿ ಸುಮ್ಮನೆ ನಿಂತುಬಿಟ್ಟಳು. ರಾಜನೂ ಹೆಚ್ಚು ಮಾತಾಡದೆ ಹೊರಟುಹೋದನು.

ಮರುದಿನ ರಾಜನು ಸಭೆಯಲ್ಲಿ, ಎಲ್ಲರನ್ನೂ ನೋಡಿದನು. ರಾತ್ರಿಯ ಯುವಕನೂ ಸಭೆಗೆ ಬಂದಿದ್ದ. ಆಗ ರಾಜನು, "ನಾನು ನನ್ನ ಮಗಳನ್ನೇ ರಾಜದ್ರೋಹಿಯಾಗಿ ನಿರ್ಣಯಿಸಿದ್ದೇನೆ. ಅವಳಿಗೆ ತೀವ್ರವಾದ ಶಿಕ್ಷೆ ವಿಧಿಸಬೇಕು" ಎಂದನು.

ಆಗ ಸಭೆಯಲ್ಲಿದ್ದ ಯುವಕನು ಎದ್ದು ನಿಂತು, "ಮಹಾಪ್ರಭುಗಳೇ, ನೀವು ನಿಮ್ಮ ಕುಮಾರಿಯನ್ನು ಕಳ್ಳಿ ಎಂದು ನಿರ್ಣಯಿಸಿರುವ ಪಕ್ಷದಲ್ಲಿ ಅವಳನ್ನು ನಿಮಗೆ ಹಿಡಿದು ಕೊಟ್ಟುದಕ್ಕಾಗಿ, ತಾವು ಪ್ರಕಟಪಡಿಸಿದಂತೆ ನನಗೆ ಅವಳನ್ನು ಕೊಟ್ಟು ಮದುವೆ ಮಾಡಬೇಕಾಗಿದೆ" ಎಂದನು.

ರಾಜನು ಅದಕ್ಕೆ ಒಪ್ಪಿಕೊಂಡು, ಆ ಯುವಕನಿಗೇ ಅವಳನ್ನು ಕೊಟ್ಟು ಮದುವೆ ಮಾಡಿದನು.

ಬೇತಾಳವು ಹೀಗೆ ಕಥೆಯನ್ನು ಮುಗಿಸಿ, "ತ್ರಿವಿಕ್ರಮ ಮಹಾರಾಜನೇ, ವಿಕ್ರಮಸೇನನು ತನ್ನ ಮಗಳನ್ನು ಏಕೆ ಶಿಕ್ಷಿಸಲಿಲ್ಲ? ಯುವಕನಿಗೆ ಮಾಡಿದ



ವಾಗ್ದಾನವನ್ನು ನಿಜಕ್ಕೂ ನೆರವೇರಿಸಬೇಕೆಂದು ಅವನಿಗಿದ್ದಿತೆ? ಅಥವಾ ತನ್ನ ಕುಮಾರಿಯನ್ನು ಶಿಕ್ಷಿಸದಿರಲು ಈ ಡಂಗುರದ ವಾಗ್ದಾನವನ್ನು ಅಡ್ಡವಿಟ್ಟುಕೊಳ್ಳುವ ಉದ್ದೇಶದಿಂದಲೇ ಮರುದಿನ ಸಭೆಗೆ ಬರಲು ಆ ಯುವಕನಿಗೆ ಹೇಳಿದನೆ? ಈ ಸಂದೇಹಕ್ಕೆ ಸಮಾಧಾನ ತಿಳಿದು ಕೂಡಾ ಹೇಳದೆ ಹೋದರೆ ನಿನ್ನ ತಲೆಯೊಡೆದು ಚೂರುಚೂರಾಗಿ ಹೋಗುತ್ತದೆ" ಎಂದು ಹೇಳಿ ಸುಮ್ಮನಾಯಿತು.

ಅದಕ್ಕೆ ತ್ರಿವಿಕ್ರಮನು ಹೀಗೆಂದ: "ಇದು ಅಷ್ಟು ಸುಲಭವಾದ ಸಮಸ್ಯೆಯಲ್ಲ. ಆ ಯುವಕನ ಪ್ರವರ್ತನೆ ಮೊದಲಿನಿಂದ ಕೊನೆಯವರೆಗೂ ಅನುಮಾನಾಸ್ಪದವಾಗಿಯೇ ಇತ್ತು. ಅವನು ತನ್ನನ್ನು ಕುರಿತು ರಾಜನಿಗೆ ಹೇಳುವಾಗ, ಚೆನ್ನಾಗಿ ಪಳಗಿದ ಕಳ್ಳನಿಗೆ ಇರಬೇಕಾದ ಲಕ್ಷಣಗಳನ್ನೇ ಹೇಳಿಕೊಂಡ. ರಾಜನಿಗೆ ಕಳ್ಳನನ್ನು ಹಿಡಿದು ಕೊಡುವುದೊಂದೇ ಅವನ ಉದ್ದೇಶವಾಗಿರುತ್ತಿದ್ದರೆ, ರಾಜನನ್ನು ಕೇಳಿ ಭಟರನ್ನು ಕರೆದುಕೊಂಡು ಹೋಗಿ ರಾಜಕುಮಾರಿಯನ್ನಾಗಲೀ, ಗುಹೆಯಲ್ಲಿರುವರೆಂದು ಹೇಳುವ ಕಳ್ಳರನ್ನಾಗಲೀ ತಾನೇ ಹಿಡಿದುಬಿಡಬಹುದಿತ್ತು. ಅವನು ರಾಜನಿಗೆ ತೋರಿಸಿದ ದೃಶ್ಯವು ಒಂದು ಕೃತ್ರಿಮ ನಾಟಕದ ಹಾಗಿದ್ದಿತು. ಅದರಲ್ಲಿದ್ದ ದೀವಿಟಿಗೆಗಳು ಕುಮಾರಿಯನ್ನು ರಾಜನು ಗುರುತಿಸಲಿಕ್ಕೇ ಹೊರತು ಬೇರೆ ಯಾವುದಕ್ಕೂ ಅಲ್ಲ. ರಾಜನಿಗೆ ಈ ದೃಶ್ಯವನ್ನು ತೋರಿಸುವುದಕ್ಕೆ ಮೊದಲು ಎರಡುದಿನಗಳ ಅವಧಿಯಲ್ಲಿ ಆ ಯುವಕನು ಈ ಪ್ರದರ್ಶನಕ್ಕೆ ಏರ್ಪಾಡು ಮಾಡಿದ್ದಾನೆ. ರಾಜನಿಗೆ ಇವನ ಮೇಲೆ ಅನುಮಾನವೂ ಇದ್ದಿತು. ತನ್ನ ಮಗಳು ಯಾವನೋ ಕಳ್ಳನನ್ನು ಪ್ರೇಮಿಸಿದ್ದಾಳೆಂದು ತಿಳಿದು, ಈ ಯುವಕನು ಅವಳನ್ನು ಕೇಳಲು ಸಾಹಸ ಮಾಡುತ್ತಾನೋ ಇಲ್ಲವೋ ಎಂಬುದನ್ನು ತಿಳಿಯಲಿಕ್ಕಾಗಿಯೇ ರಾಜನು ಅವನನ್ನು ಮರುದಿನ ಸಭೆಗೆ ಬರುವಂತೆ ಹೇಳಿದ. ಯುವಕನು ಬಂದುದು ಮಾತ್ರವಲ್ಲದೆ ಅವಳನ್ನು ಮದುವೆಯಾಗಲೂ ಸಿದ್ಧನಾದ. ಅವನೇ ಆ ಕಳ್ಳರ ನಾಯಕನೆಂದೂ, ತನ್ನ ಕುಮಾರಿ ಅವನನ್ನು ಪ್ರೇಮಿಸಿದ್ದಾಳೆಂದೂ ರಾಜನಿಗೆ ಸ್ಪಷ್ಟವಾಯಿತು. ಯುವಕನು ರಾಜಕುಮಾರಿಯನ್ನು ರಹಸ್ಯವಾಗಿ ಪ್ರೇಮಿಸುವುದಕ್ಕೆ ಬದಲಾಗಿ, ಅವಳನ್ನೇ ಕಳ್ಳಿಯೆಂದು ಹಿಡಿದು ಕೊಟ್ಟು ರಾಜನು ಮಾಡಿದ ವಾಗ್ದಾನದ ಪ್ರಕಾರ ಬಹಿರಂಗವಾಗಿ ಮದುವೆಯಾಗಲು ಒಳ್ಳೆಯ ಪಥಕವನ್ನೇ ಮಾಡಿದ್ದಾನೆ. ಅವನ ಬುದ್ಧಿವಂತಿಕೆಗೆ ರಾಜನು ಮಣಿದು ಅವರಿಬ್ಬರನ್ನೂ ಸೇರಿಸಿ ಮದುವೆಮಾಡಿದ"

ಹೀಗೆ ರಾಜನಿಗೆ ಮೌನಭಂಗವಾಗುತ್ತಲೇ ಬೇತಾಳವು ಶವದೊಂದಿಗೆ ಮಾಯವಾಗಿ ಹೋಗಿ ಮರದ ಕೊಂಬೆಯಲ್ಲಿ ನೇತಾಡತೊಡಗಿತು.





# ವಂಚನೆಗೆ ಸಂಚು

ಒಂದು ಊರಿನಲ್ಲಿ ಒಬ್ಬ ಸಣ್ಣ ಜಮೀನುದಾರ ನಿದ್ದ. ಅವನು ತುಂಬ ಒಳ್ಳೆಯವನಾಗಿ, ಊರವರಿಗೆ ಸಾಧ್ಯವಾದಷ್ಟು ಒಳಿತು ಮಾಡಿಕೊಂಡಿದ್ದುದರಿಂದ ಒಳ್ಳೆಯವನೆಂಬ ಹೆಸರು ಪಡದಿದ್ದ. ಅವನಿಗೆ ಒಬ್ಬನೇ ಮಗನಾದುದರಿಂದ ತಂದೆ ತಾಯಿಗಳು ಅತೀ ಮುದ್ದು ಮಾಡಿ ಬೆಳೆಸಿದರು. ಆದುದರಿಂದ ದೊಡ್ಡವನಾದಂತೆ ಅವನಲ್ಲಿ ಎಲ್ಲಾ ಬಗೆಯ ದುಷ್ಟ ಅಭ್ಯಾಸಗಳೂ ಸೇರಿ ಕೊಂಡುವು. ದುಷ್ಟರ ಸಹವಾಸದಲ್ಲಿ ಹಣವನ್ನು ನೀರಿನ ಹಾಗೆ ಖರ್ಚು ಮಾಡಿಕೊಂಡಿದ್ದನು.

ಒಂದು ಸಾರಿ ಜಮೀನುದಾರನ ಮಗನು ನೆರೆಯ ಊರಿಗೆ ಹೋಗಿ, ಅಲ್ಲಿ ತನ್ನ ಹತ್ತಿರವಿದ್ದ ಧನವೆಲ್ಲ ವನ್ನೂ ಖರ್ಚು ಮಾಡಿಬಿಟ್ಟನು. ಅವನಿಗೆ ಇನ್ನೂ ಹಣವು ಬೇಕಾಗಿತ್ತು. ಅವನು ಆ ಊರಿನಲ್ಲಿದ್ದ ಒಬ್ಬ ಬಡ್ಡೀ ಲೇವಾದೇವಿಯವನ ಬಳಿಗೆ ಹೋಗಿ, ತನಗೆ ಐನೂರು ರೂಪಾಯಿ ಸಾಲ ಬೇಕೆಂದೂ, ಮನೆಗೆ ಹೋದ ಕೂಡಲೇ ಬಡ್ಡಿ ಕೂಡಿಸಿ ಕಳುಹಿಸಿ ಬಿಡುತ್ತೇನೆಂದೂ ಹೇಳಿದನು.

ಆ ಬಡ್ಡೀ ವ್ಯಾಪಾರಿಗೆ ಜಮೀನುದಾರನು ಗುರುತಿ ನವನಾದುದರಿಂದ, ಅವನ ಮಗನಿಗೆ ಸಾಲ ಕೊಡುವ ನಿಶ್ಚಯಕ್ಕೆ ಬಂದು, "ನೋಡಯ್ಯಾ, ಏನಾದರೂ ಒತ್ತೆಯಿಟ್ಟುಕೊಳ್ಳದೆ ಸಾಲ ಕೊಡಬಾರದೆಂಬುದು ನನ್ನ ನಿಯಮ. ಒಂದು ವಸ್ತುವನ್ನು ಒತ್ತೆಯಿಟ್ಟು ಕೊಂಡು ಹೋಗಬಹುದು" ಎಂದನು.

ಜಮೀನುದಾರನ ಮಗ ಸ್ವಲ್ಪ ಹೊತ್ತು ಆಲೋ ಚನೆ ಮಾಡಿ, "ಅಯ್ಯ, ನನ್ನ ಹತ್ತಿರ ಈ ಸಣ್ಣ ಬಾಕುವಿನ ಹೊರತು ಮತ್ತೇನೂ ಇಲ್ಲ. ಇದನ್ನೇ ಇಟ್ಟುಕೊಂಡು ಹಣ ಕೊಡಿರಿ" ಎಂದನು.

ಬಡ್ಡೀ ವ್ಯಾಪಾರಿ ಆ ಬಾಕನ್ನು ತೆಗೆದುಕೊಂಡು, ಐನೂರು ರೂಪಾಯಿ ಕೊಟ್ಟನು.

ಮುಂದೆ ಒಂದುವರ್ಷ ಕಳೆಯಿತು. ಜಮೀನು ದಾರನು ಸತ್ತುಹೋದನು. ಆಮೇಲೆ ಜಮೀನು ದಾರನ ಮಗನಿಗೇ ಯಜಮಾನಿಕೆ ಬಂದಿತು. ಆದರೆ ಅವನು ನೆರೆಯೂರಿನ ಬಡ್ಡೀ ವ್ಯಾಪಾರಿಯಿಂದ ಪಡೆದ ಸಾಲವನ್ನು ಹಿಂದೆ ಕೊಡುವ ಗೊಡವೆಗೆ ಹೋಗಲೇ ಇಲ್ಲ. ಆ ಸಾಲವು ಸರಳ ರೀತಿಯಲ್ಲಿ ವಸೂಲು ಬರುವಂತಿಲ್ಲವೆಂದೂ, ಅದನ್ನು ಉಪಾಯ ದಿಂದ ಬರಮಾಡಿಕೊಳ್ಳಬೇಕೆಂದೂ ಆ ಬಡ್ಡೀ ವ್ಯಾಪಾರಿ ನಿಶ್ಚಯಿಸಿಕೊಂಡನು.

ಬಿ. ಎಸ್. ನಾರಾಯಣ

ಆ ಬಡ್ಡೀ ವ್ಯಾಪಾರಿಯ ಊರಿನ ಅಗಸನೇ ಜಮೀನುದಾರರ ಮನೆಯ ಬಟ್ಟೆಗಳನ್ನು ಒಗೆಯುತ್ತಾನೆ. ಬಡ್ಡೀ ವ್ಯಾಪಾರಿಯ ಬಟ್ಟೆಗಳನ್ನು ಒಗೆಯುವವನೂ ಅವನೇ.

ಒಂದುದಿನ ಬಡ್ಡೀ ವ್ಯಾಪಾರಿ ಅಗಸನಿಗೆ ಬಟ್ಟೆ ಹಾಕುತ್ತ, "ತೀರಿಹೋದ ಜಮೀನುದಾರರ ಮಗ ತನ್ನ ಬಾಕನ್ನು ನನ್ನ ಹತ್ತಿರ ಒತ್ತೆಯಿಟ್ಟು ಸಾಲ ತೆಗೆದುಕೊಂಡಿದ್ದಾನೆ. ಆ ಬಾಕು ಎಲ್ಲಿ ಹೋಯಿತೋ ಕಾಣುವುದಿಲ್ಲ. ನಾಳೆ ಚಿಕ್ಕ ಜಮೀನುದಾರ ಹಣ ತಂದು ಬಾಕನ್ನು ವಾಪಾಸು ಕೊಡುವಂತೆ ಕೇಳಿದರೆ ಏನು ಮಾಡಬೇಕೋ ತಿಳಿಯದು" ಎಂದನು.

ಆ ಅಗಸ ಮರುದಿನ ಜಮೀನುದಾರನ ಮನೆಗೆ ಹೋಗಿ, ಜಮೀನುದಾರನ ಮಗನ ಹತ್ತಿರ ಆ ಸಂಗತಿಯನ್ನು ಹೇಳಿಬಿಟ್ಟ. ಅದನ್ನು ಕೇಳಿ ಜಮೀನುದಾರರ ಮಗನಿಗೆ ಬಹಳ ಸಂತೋಷವಾಯಿತು. ಅವನು ಜಮೀನುದಾರನ ಸಾಲ ಐನೂರು ರೂಪಾಯಿ ಮತ್ತು ಬಡ್ಡಿ ಇನ್ನೂರು ರೂಪಾಯಿ ಕೂಡಾ ಗಂಟು ಕಟ್ಟಿಕೊಂಡು ಬಡ್ಡೀ ವ್ಯಾಪಾರಿಯ ಬಳಿಗೆ ಬಂದನು. ಬಡ್ಡೀ ವ್ಯಾಪಾರಿ ಅವನನ್ನು ಆದರದಿಂದ ಕುಳಿತುಕೊಳ್ಳಲು ಹೇಳಿ ಉಪಚಾರ ಮಾಡಿದನು.

"ಕುಳಿತುಕೊಳ್ಳಲು ಸಮಯವಿಲ್ಲ. ಬೇಗನೇ ಹೋಗಬೇಕಾಗಿದೆ. ನಿಮ್ಮಿಂದ ಪಡೆದ ಸಾಲವನ್ನು ತೀರಿಸಿ, ನಾನು ಒತ್ತೆಯಿಟ್ಟ ಬಾಕು ವಾಪಾಸು ತೆಗೆದುಕೊಂಡು ಹೋಗೋಣವೆಂದು ಬಂದೆ" ಎಂದ ಜಮೀನುದಾರನ ಮಗ.

"ಒತ್ತೆಯಿಟ್ಟಿದ್ದೀರೇನು ಬಾಕು?" ಎಂದು ತನಗೆ ನೆನಪಿಲ್ಲದಂತೆ ಕೇಳಿದ ಬಡ್ಡೀ ವ್ಯಾಪಾರಿ.

"ಒತ್ತೆಯಿಡದೆ ಕೊಡುವುದಿಲ್ಲವೆಂದಿರಲ್ಲಾ? ಬಾಕು ಪಡೆದುಕೊಂಡು ಐನೂರು ಕೊಟ್ಟಿರಿ. ಅದು ನಮ್ಮ ತಾತನ ಕಾಲದ ಬಾಕು. ನಮ್ಮ ಮನೆತನದ ಗೌರವ ಚಿಹ್ನೆಯದು. ಅದು ಕಳೆದು ಹೋಯಿತೆಂದರೆ ಹತ್ತುಸಾವಿರ ರೂಪಾಯಿ ದಂಡ ತೆರಬೇಕಾದೀತು!" ಎಂದ ಜಮೀನುದಾರನ ಮಗ.

ವ್ಯಾಪಾರಿ ಸಾವಧಾನವಾಗಿ, "ನೋಡುತ್ತೇನೆ. ಮೊನ್ನೆ ನೆನಪಿಗೆ ಬಂತು. ಹುಡುಕಿದಾಗ ಸಿಗಲಿಲ್ಲ. ಅಂಥಾದ್ದು ಕಳೆದುಹೋದರೆ ನಷ್ಟ ಕೊಡದೆ ತಪ್ಪುವುದಿಲ್ಲವಷ್ಟೇ? ಎಲ್ಲಿ, ಸಾಲಪಡೆದ ಅಸ್ಲು ಬಡ್ಡಿ ಪೂರಾ ತಂದಿದ್ದೀರಾ?" ಎನ್ನಲು "ತಂದಿದ್ದೇನೆ" ಎಂದು ಗಂಟು ಮುಂದೆ ಚಾಚಿದ ಜಮೀನುದಾರನ ಮಗ. ಬಡ್ಡೀ ವ್ಯಾಪಾರಿ ಅದನ್ನು ಪಡೆದುಕೊಂಡು ಲೆಕ್ಕ ಮಾಡಿ ನೋಡಿ, ಪೆಟ್ಟಿಗೆಯಲ್ಲಿಟ್ಟು, ಒಳಗೆ ಹೋಗಿ, ಬಾಕನ್ನು ತಂದು ಜಮೀನುದಾರನ ಮಗನಿಗೆ ಕೊಟ್ಟ. ಜಮೀನುದಾರನ ಮಗ ಮುಖವನ್ನು ಬಾಡಿಸಿಕೊಂಡು ಮನೆಗೆ ಹಿಂದಿರುಗಿದ.



## ೧೫೬. ಪ್ರಕೃತಿ ಶಿಲ್ಪ

ಅರ್ಮೇನಿಯಾ ದೇಶವು ಅದ್ಭುತಗಳಿಗೆ ಪ್ರಸಿದ್ಧಿಯಾದುದಂತೆ. ಈ ಗುಡ್ಡದ ಮೇಲೆ ಕಾಣಿಸುವ ಶಿಲ್ಪವು ಮಾನವ ಕಲ್ಪಿತವಲ್ಲ, ಪ್ರಕೃತಿ ನಿರ್ಮಿಸಿದುದು. ಇದರಲ್ಲಿ ಅನೇಕ ಗುಹೆಗಳಂಥವು ಕೂಡಾ ಇವೆ. ಅಲ್ಲಲ್ಲಿ ಸ್ವಚ್ಛವಾದ ನೀರಿನ ಒರತೆಗಳಿವೆ. ಅವುಗಳ ನೀರನ್ನು ಜಲಾಶಯಗಳಲ್ಲಿ ಭದ್ರಪಡಿಸಿ ಅರ್ಮೇನಿಯಾದಲ್ಲಿರುವ ನಗರಗಳಿಗೆ ಸರಬರಾಯಿ ಮಾಡುತ್ತಾರೆ.





# ಉಪದೇಶ

ಅನೇಕ ಶತಮಾನಗಳ ಹಿಂದೆ ಕೋಸಲ ದೇಶವನ್ನು ಪ್ರಚಂಡನೆಂಬ ರಾಜನು ಪಾಲಿಸುತ್ತಿದ್ದನು. ಅವನ ಪರಿಪಾಲನೆಯಲ್ಲಿ ಪ್ರಜೆಗಳಿಗೆ ಯಾವ ಕೊರತೆಯೂ ಇರಲಿಲ್ಲ. ಅಂತಹವನು ಹೃದಯಾಘಾತದಿಂದ ಅಕಾಲ ಮರಣಕ್ಕೆ ಗುರಿಯಾದುದರಿಂದ, ಇನ್ನೂ ವಿದ್ಯಾಭ್ಯಾಸ ಮಾಡುತ್ತಿದ್ದ ಪ್ರಚಂಡ ರಾಜನ ಮಗನಾದ ಬಾಲಕ ಸುಕುಮಾರನು, ರಾಜನಾಗಿ ಅಭಿಷೇಕಿಸಿಕೊಳ್ಳಬೇಕಾಗಿ ಬಂತು. ಅವನನ್ನು ಸಿಂಹಾಸನದಲ್ಲಿ ಕೂಡಿಸಿ ಮಂತ್ರಿ ಮೊದಲಾದವರು ರಾಜಕಾರ್ಯಗಳನ್ನು ನಿರ್ವಹಿಸ ತೊಡಗಿದರು.

ಸಾಧಾರಣವಾಗಿ ಅಗತ್ಯವಿರುವ ಎಲ್ಲಾ ಬಗೆಯ ವಿದ್ಯೆಗಳನ್ನು ಕಲಿತು ಮುಗಿದ ಮೇಲೆಯೇ, ಯುವ ರಾಜನಿಗೆ ರಾಜನೀತಿಯನ್ನು ಬೋಧಿಸುವುದು ಕೋಸಲ ದೇಶದ ಆಚಾರವಾಗಿತ್ತು. ಆದುದರಿಂದ ಸುಕುಮಾರನು ರಾಜಗುರುಗಳ ಬಳಿಯಲ್ಲಿ ರಾಜನೀತಿ ಕಲಿಯುವುದಕ್ಕೆ ಮೊದಲೇ ರಾಜನಾಗಿಬಿಟ್ಟನು. ಅವನಿಗೆ ಎಲ್ಲಾ ವಿದ್ಯೆಗಳನ್ನು ಕಲಿಸಿದವನು ಸುಮಂತ್ರನೆಂಬ ಪಂಡಿತ. ಇವನೇ ರಾಜಕುಟುಂಬದ ಪ್ರಾಥಮಿಕ ಗುರು. ಸುಮಂತ್ರನು ವಿದ್ಯಾವಂತ ಮಾತ್ರವಲ್ಲದೆ ತತ್ತ್ವವೇತ್ತನಾಗಿದ್ದನು. ಪಟ್ಟಾಭಿಷೇಕ ಮಾಡಿಸಿಕೊಂಡ ಮೇಲೆ ಸುಮಂತ್ರ ಪಂಡಿತನು ಸುಕುಮಾರನಿಗೆ ಕೆಲವು ಉಪದೇಶಗಳನ್ನು ಮಾಡಿದನು. ಅವೇನಂದರೆ "ಮನುಷ್ಯರಿಗೆ ಮುಖ್ಯವಾದುದು ಮನಸ್ಸು; ಅದನ್ನು ಯಾವಾಗಲೂ ಸ್ವಚ್ಛವಾಗಿ ಇಟ್ಟುಕೊಳ್ಳಬೇಕು. ತಪ್ಪು ಕೆಲಸಗಳನ್ನು ಕುರಿತು ಯಾವಾಗಲೂ ಆಲೋಚಿಸಿಕೊಂಡಿರುವುದಕ್ಕಿಂತ, ಒಂದುಸಾರಿ ತಪ್ಪು ಮಾಡಿ ಶಾಶ್ವತವಾಗಿ ಮನಸ್ಸನ್ನು ಕ್ಷುಬ್ಧಪಡಿಸಿಕೊಳ್ಳುವುದು ಒಳ್ಳೆಯದು.

"ಪ್ರತಿ ಮನುಷ್ಯನಿಗೂ ಅಹಂಕಾರವಿರುತ್ತದೆ. ಆದುದರಿಂದ ತಾನೇ ಘನವಂತನೆಂದುಕೊಳ್ಳುತ್ತಾನೆ. ಇದಿರಾಳಿಯ ದೊಡ್ಡತನವನ್ನು ಕಂಡುಕೊಂಡವನೇ ನಿಜಕ್ಕೂ ದೊಡ್ಡವನು. ಅಂತಹವರನ್ನೇ ರಾಜನು ತನ್ನ ಹತ್ತಿರ ಬರಗೊಳಿಸಿ ಸ್ನೇಹ ಮಾಡಬೇಕು. ಆಗ ಅಹಂಕಾರ ಬರಲು ಅವಕಾಶವಿಲ್ಲ.

"ಮನುಷ್ಯರಲ್ಲಿರುವುದು ಎರಡೇ ಬಗೆಗಳು, ಒಳ್ಳೆಯವರು ಮತ್ತು ಕೆಟ್ಟವರು. ದೇಶದಲ್ಲಿರುವ ಕೆಟ್ಟವರನ್ನು ನಾಶಮಾಡಿ ಒಳ್ಳೆಯವರು ಮಾತ್ರ ಇರುವಂತೆ ಮಾಡುವುದು ರಾಜನ ಕರ್ತವ್ಯ.

"ನಾವು ಏನು ಸಂಕಲ್ಪ ಮಾಡಿಕೊಂಡರೂ ಅದಕ್ಕೆ ಭಗವಂತನ ಸಹಕಾರವಿಲ್ಲದೆ ಹೋದರೆ ಯಾವ ಕೆಲಸವೂ ನಡೆಯಲಾರದು. ಭಗವಂತನ ಸಹಕಾರ ಒಂದಿದ್ದರೆ ಸಂಕಲ್ಪಿಸದೇ ಬಿಟ್ಟ ಕಾರ್ಯ ಕೂಡಾ ಅದರಷ್ಟಕ್ಕೆ ಅದೇ ನಡೆದು ಹೋಗುತ್ತದೆ. ಆದುದರಿಂದ ದೇವರನ್ನು ಮರೆಯ ಬಾರದು."

ಈ ಬಗೆಯ ಸುಮಂತ್ರನ ಉಪದೇಶಗಳನ್ನು ಕೇಳಿಕೊಂಡ ಸುಕುಮಾರನು ತನಗೆ ರಾಜನೀತಿ ಚೆನ್ನಾಗಿ ತಿಳಿಯಿತೆಂದು ಭಾವಿಸಿದನು. ಅನಂತರ ಒಂದುವರ್ಷದೊಳಗೆ ಅವನೊಬ್ಬ ವಿಲಾಸೀ ರಾಜನಾಗಿ ಪರಿವರ್ತನೆಗೊಂಡನು. ಪ್ರಚಂಡ ರಾಜನ ಪರಿಪಾಲನೆಯಲ್ಲಿ ಸುಖವನ್ನೂ ನೆಮ್ಮದಿಯನ್ನೂ ಅನುಭವಿಸಿದ ಪ್ರಜೆಗಳಿಗೆ, ಇವನ ಮಗ ಸುಕುಮಾರನ ಆಳ್ವಿಕೆ ಬಹಳ ಅಸಂತೃಪ್ತಿಯನ್ನುಂಟುಮಾಡ ತೊಡಗಿತು. ಹಿತ ಚಿಂತಕರಾದ ಮಂತ್ರಿ ಅಧಿಕಾರಿಗಳ ಮೇಲೆ ಕೂಡಾ ರಾಜನು ತನ್ನ ಪ್ರಭಾವ ಬೀರ ತೊಡಗಿದ. ಅದರಿಂದ ಪ್ರಜೆಗಳು ಅನೇಕ ಬಗೆಯ ಕಷ್ಟ ಕಾರ್ಪಣ್ಯಗಳಿಗೆ ಗುರಿಯಾಗತೊಡಗಿದರು.

ಹೀಗೆಯೇ ಎರಡು ವರ್ಷ ಕಳೆಯುತ್ತಿರಲು, ಆ ರಾಜ್ಯದ ಪರಿಸ್ಥಿತಿ ಅಸ್ತವ್ಯಸ್ತವಾಗಿಬಿಟ್ಟಿತು. ಆರ್ಥಿಕವಾಗಿಯೂ ಪ್ರಜೆಗಳು ನಾನಾ ಬಗೆಯ ಉದ್ಗಾರಗಳನ್ನು ತೆಗೆಯುತ್ತಿರಲು, ಸೈನಿಕ ಬಲವೂ ನಿರುತ್ಸಾಹಗೊಂಡು ಬಲಹೀನವಾಯಿತು. ಬಗೆಬಗೆಯ ಪುಕಾರುಗಳೂ ವದಂತಿಗಳೂ ಹೊರಟುವು. ಇದು ನೆರೆದೇಶಗಳಿಗೂ ತಿಳಿಯಿತು. ನೆರೆದೇಶದ ರಾಜನೊಬ್ಬನು ಕೋಸಲ ದೇಶವನ್ನು ಜಯಿಸಿಕೊಳ್ಳಬೇಕೆಂದು ಸೈನಿಕ ಸನ್ನಾಹಗಳನ್ನು ಮಾಡುತ್ತಿರುವನೆಂದೂ ಚಾರರಿಂದ ಗೊತ್ತಾಯಿತು. ಬುದ್ಧಿ ಬೆಳೆಯಿಸಿ ಕೊಂಡಿದ್ದ ಸುಕುಮಾರ ರಾಜನಿಗೆ ಹೀಗೇಕಾಯಿ ತೆಂದು ಯೋಚನೆ ಹಿಡಿಯಿತು. ತನಗೆ ಉಪದೇಶಮಾಡಿದ ಗುರುವಿನ ನೆನಪು ಬಂತು. ಈ ಅಪಾಯಕಾರಿಯಾದ ಸಮಾಚಾರವನ್ನು



ಕೇಳಿ ಸುಕುಮಾರನು ತನಗೆ ರಾಜನೀತಿ ಉಪದೇಶಿಸಿದ ಸುಮಂತ್ರನ ಬಳಿಗೆ ಹೋಗಿ, "ಗುರುಗಳೇ, ನಾನು ರಾಜನಾದಂದಿನಿಂದ ನಿಮ್ಮ ಬೋಧನೆಯ ಪ್ರಕಾರವೇ ನಡೆದುಕೊಂಡಿದ್ದೇನೆ. ಆದರೆ ನನ್ನ ಪರಿಪಾಲನೆ ಸಕ್ರಮವಾಗಿ ನಡೆದಿರುವಂತೆ ಕಾಣುವುದಿಲ್ಲ. ದೇಶವು ಬಲಹೀನವಾಗಿದೆ. ಶತ್ರುಗಳು ಇದರ ಪ್ರಯೋಜನ ಪಡೆಯಲು ಸನ್ನಾಹ ಮಾಡುತ್ತಿದ್ದಾರೆ. ಇದೇಕೆ ಹೀಗಾಯಿತು ? ನನಗೆ ಬಹಳ ತಳಮಳವಾಗಿದೆ. ನೀವೇನು ಹೇಳುವಿರಿ ?" ಎಂದನು.

"ರಾಜಾ, ನಾನು ಹೇಳಿದಂತೆ ನೀನು ಮಾಡದೆ ಕೇವಲ ವಿಲಾಸಪುರುಷನಾಗಿ ಹೋದೆ. ಅದರಿಂದಲೇ ಹೀಗಾಯಿತು" ಎಂದ ಸುಮಂತ್ರ.

"ಪಾಪದ ಆಲೋಚನೆಗಳನ್ನು ಮನಸ್ಸಿನಲ್ಲಿಟ್ಟುಕೊಳ್ಳದೆ, ಆ ತಪ್ಪನ್ನು ಮಾಡಿ ಅವುಗಳಿಂದ ಮನಸ್ಸನ್ನು ಶುಭ್ರಮಾಡಬೇಕೆಂದು ನೀವೇ ಹೇಳಿದಿರಿ. ಅದರಂತೆ ಮದ್ಯಪಾನದಿಂದಲೂ, ಸ್ತ್ರೀಯರಿಂದಲೂ ನನ್ನ



ಮನಸ್ಸು ವಿಮುಕ್ತಿ ಹೊಂದಿದಂತೆ ಕಾಣಲಿಲ್ಲ. ಅಂತಹ ತಪ್ಪುಗಳನ್ನು ಇನ್ನಷ್ಟು ಮಾಡಬೇಕೆನಿಸುತ್ತದೆ. ಹೀಗಿರುವಾಗ ಮನಸ್ಸು ಶುಭ್ರವಾಗುವುದು ಯಾವಾಗ ?" ಎಂದ ಸುಕುಮಾರ.

ಈ ಮಾತು ಕೇಳಿ ಸುಮಂತ್ರನಿಗೆ ಗಾಬರಿಯಾಯಿತು. ತನ್ನ ಉಪದೇಶವು ಇಂತಹ ವಿಪರೀತಕ್ಕೆ ದಾರಿ ಮಾಡುವುದೆಂದು ಅವನು ಊಹಿಸಿರಲಿಲ್ಲ. ಏನು ಹೇಳಬೇಕೆಂದು ತೋರದೆ, ಅವನು ರಾಜಗುರುಗಳ ಆಲೋಚನೆ ಕೇಳೋಣ ಎಂದು ಹೇಳಿ, ರಾಜಗುರುಗಳನ್ನು ಕರೆತರಲು ಸೇವಕನನ್ನು ಕಳುಹಿಸಿದನು.

ಬಹಳ ಕಾಲದ ಮೇಲೆ ರಾಜಗುರುಗಳೂ ಸುಕುಮಾರನೂ ಸಂಧಿಸಿದರು. ರಾಜಗುರುಗಳು ಸುಮಂತ್ರನಿಗೆ ಉಂಟಾದ ಸಮಸ್ಯೆಯನ್ನು ಕುರಿತು ಕೇಳಿ, ಕಿರುನಗೆ ನಕ್ಕು, "ಹೀಗೇನು ? ನೀವು ಸುಕುಮಾರನಿಗೆ ಮಾಡಿದ ಉಪದೇಶಗಳು ಬಹಳ ದೊಡ್ಡವೆಂಬುದು ನಿಜವೇ. ಆದರೆ ಅಂತಹ ಉಪದೇಶಗಳು ವೇದಾಂತಿಗಳಿಗೆ ಹೊರತು ಸಾಮಾನ್ಯರಿಗೆ ಉಪಯೋಗವಿಲ್ಲದುವು. ಪ್ರಜಾಪಾಲನೆ ಮಾಡುವ ರಾಜಕುಮಾರನಿಗಂತೂ ಅಂತಹ ಉಪದೇಶ ಮಾಡಲೇ ಬಾರದು. ಎಂದು ಹೇಳಿ, ಸುಕುಮಾರನನ್ನು ನೋಡಿ. "ರಾಜಾ, ಕೇಳು. ರಾಜನಾದವನಿಗೆ ಪ್ರಧಾನವಾದುದು ಮನಸ್ಸನ್ನು ಶುಭ್ರವಾಗಿರಿಸಿಕೊಳ್ಳುವುದಲ್ಲ. ಯಾವುದನ್ನೂ ನಿಧಾನವಾಗಿ ಆಲೋಚಿಸಬೇಕು. ವಿಪರೀತವಾದ ಕೋಪ ಬಂದು ನೀನು ಒಬ್ಬ ಮನುಷ್ಯನನ್ನು ಕೊಂದುಬಿಟ್ಟೆ ಅಂದುಕೋ. ರಾಜನಾದುದರಿಂದ ನಿನ್ನನ್ನು ತಡೆಯುವವರಾರಿಲ್ಲ. ಆ ಮನುಷ್ಯನನ್ನು ಕೊಂದು ನಿನ್ನ ಮನಸ್ಸನ್ನು ಶುಭ್ರ ಮಾಡಿಕೊಳ್ಳುವೆ. ಆಮೇಲೆ ಎಷ್ಟೇ ಪ್ರಯತ್ನಪಟ್ಟರೂ ಆ ಮನುಷ್ಯನನ್ನು ಮತ್ತೆ ಬದುಕಿಸಲು ನಿನ್ನಿಂದಾಗದು. ಆದುದರಿಂದ ದುಡುಕಿನಿಂದ ನಿನಗಿರುವ ರಾಜಪ್ರಭಾವವನ್ನು ತೋರಿಸಬಾರದು. ನೀನು ನಿನ್ನ ಪ್ರವರ್ತನೆಗಳನ್ನು ಅಂಕೆಯಲ್ಲಿಟ್ಟುಕೊಳ್ಳಬೇಕು." ಎಂದರು.

ರಾಜಗುರುಗಳು ಹೇಳಿದ ಮಾತಿನೊಳಗಿನ ಸತ್ಯವು ಸುಕುಮಾರನಿಗೆ ಅರ್ಥವಾಯಿತು. ರಾಜನಾಗಬೇಕಾದವನಿಗೆ ಉಪದೇಶ ಮಾಡುವ ಶಕ್ತಿ ತನಗಿಲ್ಲವೆಂದು ಸುಮಂತ್ರನು ತಿಳಿದು, ಕ್ಷಮಿಸಬೇಕೆಂದು ಕೇಳಿಕೊಂಡು ಹೊರಟುಹೋದನು.

ಆಮೇಲೆ ರಾಜಗುರುಗಳು ಸುಕುಮಾರನನ್ನು ಕುರಿತು, "ನೀನು ರಾಜನಾಗಿ ಅಧಿಕಾರದಲ್ಲಿರುವವನು. ಬುದ್ಧಿವಂತರಾರೂ ನಿನ್ನನ್ನು ನಿನ್ನ ಇದಿರಿನಲ್ಲಿ ನಿಂದಿಸಲಾರರು. ನಿನ್ನಿಂದ ಬಹುಮಾನ ಪಡೆಯಲಿಕ್ಕಾಗಿ ಎಷ್ಟೋ ಮಂದಿ ನಿನ್ನನ್ನು ಇಂದ್ರನೆಂದೂ ಚಂದ್ರನೆಂದೂ ಹೊಗಳುವರು. ಅವರೆಲ್ಲಾ ನಿನ್ನ ದೊಡ್ಡತನವನ್ನು ತಿಳಿದುಕೊಂಡವರೆಂದುಕೊಂಡು, ಸೇರಿಸಿಕೊಳ್ಳುವುದು ಬುದ್ಧಿಹೀನತೆಯಾಗುತ್ತದೆ. ಅಂಥವರಾರೂ ರಾಜಭಕ್ತಿಯುಳ್ಳವರಲ್ಲ. ರಾಜಭಕ್ತಿಯುಳ್ಳವರಾರೆಂಬುದು ಸುಲಭವಾಗಿ ಗೊತ್ತಾಗ

ಲಾರದು. ನಿಜವಾದ ರಾಜಭಕ್ತಿಯುಳ್ಳವನನ್ನು ನಿನಗೆ ತೋರಿಸುತ್ತೇನೆ. ಈ ರಾತ್ರಿ ಅವನ ಮನೆಗೆ ನಾವು ವೇಷ ಬದಲಾಯಿಸಿಕೊಂಡು ಹೋಗೋಣ" ಎಂದರು.

ಅದರಂತೆ ರಾತ್ರಿಯಲ್ಲಿ ಅವರಿಬ್ಬರೂ ವೇಷ ಬದಲಾಯಿಸಿಕೊಂಡು ಒಬ್ಬ ಬಡ ಬ್ರಾಹ್ಮಣನ ಮನೆಗೆ ಹೋದರು. ನೆರೆಯ ಊರಿನಿಂದ ಬಂದವರೆಂದು ಹೇಳಿದ ಕೂಡಲೇ ಆ ಬ್ರಾಹ್ಮಣನು ಅವರಿಗೆ ಆ ರಾತ್ರಿ ತನ್ನ ಮನೆಯಲ್ಲಿ ಆಶ್ರಯವಿತ್ತು, ಆತಿಥ್ಯವನ್ನೂ ಕೊಟ್ಟು ಆದರಿಸಿದನು.

ಆಮೇಲೆ ಲೋಕಾಭಿರಾಮವಾಗಿ ಮಾತಾಡುತ್ತ, ರಾಜಗುರುಗಳು ಆ ಬ್ರಾಹ್ಮಣನೊಂದಿಗೆ ದೇಶದ ಪರಿಸ್ಥಿತಿಯನ್ನು ಕುರಿತು ವಿಚಾರಿಸಿದರು. ಕೂಡಲೇ ಬ್ರಾಹ್ಮಣನಿಗೆ ಬಹಳ ಸಿಟ್ಟುಬಂದು, ಆವೇಶಗೊಂಡವನ ಹಾಗೆ ಆ ದೇಶದ ರಾಜನನ್ನು ಬೈದಾಡತೊಡಗಿದನು. ಈಗಿನ ರಾಜ ಪ್ರಚಂಡ ಮಹಾರಾಜರ ಹೆಸರನ್ನು ಕೆಡಿಸಲು ಹುಟ್ಟಿದವನೆಂದೂ, ಪ್ರಜೆಗಳಿಗೆ ಬಹಳ ಕಷ್ಟ ಕೊಡುತ್ತ, ತಾನು ವಿಲಾಸ ಜೀವನ ನಡೆಸುತ್ತಿದ್ದಾನೆಂದೂ ಅವನು ನಿಂದಿಸುವುದನ್ನು ಕೇಳಿ, ಸುಕುಮಾರನು ಬಹಳ ಕಷ್ಟದಿಂದ ತನ್ನ ಕೋಪವನ್ನು ಅಡಗಿಸಿಕೊಂಡನು. ರಾಜನ ಪ್ರಭಾವವನ್ನು ದುಡುಕಿ ತೋರಿಸಬಾರದೆಂದು ರಾಜಗುರುಗಳು ಹೇಳಿದುದನ್ನು ಅವನು ನೆನಪಿಟ್ಟುಕೊಂಡಿದ್ದ.

ಅರ್ಧರಾತ್ರಿಯ ಹೊತ್ತಿನಲ್ಲಿ ರಾಜಗುರುಗಳೂ ಸುಕುಮಾರನೂ ಆ ಬ್ರಾಹ್ಮಣನೊಂದಿಗೆ ಹೇಳಿಕೊಳ್ಳದೆಯೇ ಅಲ್ಲಿಂದ ಹೊರಟುಬಿಟ್ಟರು. ಆಗ ಸುಕುಮಾರನು ರಾಜಗುರುಗಳೊಂದಿಗೆ, "ಈ ಬ್ರಾಹ್ಮಣನನ್ನು ನಾನು ನೋಡಿದ್ದೇನೆ. ದಿನಾ ಆಸ್ಥಾನದ ಕಡೆಗೆ ಬರುತ್ತಾನೆ. ಸುಮ್ಮನೆ ನಿಂತಿರುತ್ತಾನೆಯೇ ಹೊರತು ಏನೂ ಮಾತಾಡುವುದಿಲ್ಲ. ಆದುದರಿಂದ ಇವನಿಗೇನೂ ಸಂಭಾವನೆ ಕೊಡಬೇಕಾಗಿಲ್ಲವೆಂದು ನಾನು ಆದೇಶ ಮಾಡಿದ್ದೆ. ಸುಮ್ಮನೆ ಬಂದು ನಿಲ್ಲುವವನಿಗೆ ಸಂಭಾವನೆ ಏಕೆ ಕೊಡಬೇಕು? ಆದುದರಿಂದಲೇ ಇವನು ನನ್ನ ಮೇಲೆ ಬಹಳ





ಕೋಪವನಿಟ್ಟುಕೊಂಡಿದ್ದಾನೆ. ಬಾಯಿಗೆ ಬಂದ ಹಾಗೆ ಮಾತಾಡಿದನು. ನೀವು ಜತೆಯಲ್ಲಿರದಿದ್ದರೆ ನಾನು ಏನು ಮಾಡಿಬಿಡುತ್ತಿದ್ದನೋ? ಬಹಳ ಕಷ್ಟದಿಂದ ಸಹಿಸಿಕೊಂಡು ಸುಮ್ಮನಿದ್ದೆ" ಎಂದನು.

"ಇರಲಿ, ನಾಳೆ ಮತ್ತೆ ಇದೇ ವೇಷದಲ್ಲಿ ಅಲ್ಲಿಗೆ ಹೋಗಿ ಏನು ನಡೆಯುವುದೆಂದು ನೋಡುವಾ." ಎಂದರು ರಾಜಗುರುಗಳು.

ಅದರಂತೆ ಮರುದಿನ ರಾತ್ರಿ ಅವರಿಬ್ಬರೂ ಮತ್ತೆ ಬಂದಾಗ ಆ ಬ್ರಾಹ್ಮಣನು ಅವರಿಗೆ ಮರ್ಯಾದೆ ಮಾಡಿ, "ಯಾಕೋ ನಿನ್ನೆ ರಾತ್ರಿಯಲ್ಲೇ ಎದ್ದು ಹೊರಟು ಹೋಗಿಬಿಟ್ಟಿರಿ. ಏನು ಕಾರಣವೋ ತಿಳಿಯಲಿಲ್ಲ?" ಎಂದು ಕೇಳಿದ.

ಕೂಡಲೇ ರಾಜಗುರುಗಳು ಬ್ರಾಹ್ಮಣನಿಗೆ ಸುಕುಮಾರನು ಯಾರೆಂಬುದನ್ನು ತಿಳಿಸುತ್ತ, "ಇವನನ್ನು ಯಾರೆಂದುಕೊಂಡಿರಿ? ಈ ದೇಶದ ರಾಜ. ನೀವು ಹೇಳಿದ ಮಾತುಗಳಿಂದ ಇವನಿಗೆ ನಿದ್ದೆಯೇ ಬರಲಿಲ್ಲ. ತನ್ನನ್ನು ಹಾಗೆ ನಿಂದಿಸಿದವರ ಮನೆಯಲ್ಲಿ ನಿದ್ದೆ ಮಾಡಲು ಹಿಡಿಸದೆ, ಹೊರಟು ಹೋಗೋಣವೆಂದುದರಿಂದ, ಹೊರಟೆವು." ಎಂದರು. ಸುಕುಮಾರನೂ ತನ್ನ ಮಾರುವೇಷವನ್ನು ತೊಲಗಿಸಿಕೊಂಡನು.

ಬ್ರಾಹ್ಮಣನು ಗಾಬರಿಯಿಂದ ಎದ್ದು ನಿಂತು, "ತಾವು ಪ್ರಭುಗಳೆಂದು ತಿಳಿಯದೆ ನಿನ್ನೆ ಹಾಗೆಲ್ಲಾ ಹೇಳಿಬಿಟ್ಟೆ. ನನ್ನನ್ನು ಕ್ಷಮಿಸಬೇಕು. ಬಡ ಬ್ರಾಹ್ಮಣನಾದ ನಾನು ತಮಗೆ ಸರಿಯಾಗಿ ಮರ್ಯಾದೆ ಮಾಡಲಾರದೆ ಹೋದೆ" ಎನ್ನುತ್ತ ರಾಜನಿಗೆ ಒಂದು ಪೀಠವನ್ನು ತಂದಿಟ್ಟನು.

ರಾಜಗುರುಗಳು ನಕ್ಕು "ಏನಯ್ಯಾ ಹುಚ್ಚು ಬ್ರಾಹ್ಮಣ! ಇನ್ನು ನೀನು ಎಷ್ಟೇ ಮರ್ಯಾದೆ ಮಾಡಿದರೂ ರಾಜನ ಮನಸ್ಸು ಬದಲಾಗದು. ನೀನು ಹೇಗಿದ್ದರೂ ಶಿಕ್ಷೆ ಅನುಭವಿಸಲೇ ಬೇಕಾಗುತ್ತದೆ. ರಾಜನನ್ನು ಅವನ ಎದುರಿನಲ್ಲೇ ನಿಂದಿಸುವುದು ಸಾಮಾನ್ಯ ವಿಷಯವೆಂದುಕೊಂಡೆಯಾ?" ಎಂದರು.

ಬ್ರಾಹ್ಮಣನು ಒಂದಿಷ್ಟೂ ಹೆದರದೆ, "ಶಿಕ್ಷೆಗೆ ಹೆದರಿ ನಾನು ಈ ಮರ್ಯಾದೆ ಮಾಡುವುದಲ್ಲ. ನಮ್ಮ ದೇಶವನ್ನಾಳುವ ರಾಜರ ವಿಷಯ ವ್ಯಕ್ತಿಗತವಾಗಿ ನನಗೆ ಹಿಡಿಸದೆ ಹೋದರೂ ಆಸ್ಥಾನವನ್ನು ಗೌರವಿಸುವವನು ನಾನು. ಅವರು ಎಷ್ಟೇ ತಪ್ಪುಗಳನ್ನು ಮಾಡಿದರೂ ರಾಜನ ಸ್ಥಾನದಲ್ಲಿ ಇರುವಷ್ಟು ಕಾಲ ನಾನು ಅವರನ್ನು ಗೌರವಿಸುತ್ತೇನೆ. ನನ್ನ ದೇಶದ ರಾಜನನ್ನು ಅಗೌರವ ಪಡಿಸಿದರೆ ನಾನು ನನ್ನನ್ನೇ ಅವಮಾನ ಪಡಿಸಿದಂತೆ. ರಾಜನ ಗುಣವು ಒಳ್ಳೆಯದಾಗಲೆಂದು ಕೋರುತ್ತ, ಅವರನ್ನು ಆಶೀರ್ವದಿಸಲಿಕ್ಕಾಗಿ ನಾನು ದಿನಾ ಆಸ್ಥಾನಕ್ಕೆ ಹೋಗುತ್ತೇನೆ. ಆದರೆ ಅವರಲ್ಲಿಲ್ಲದ ಗುಣಗಳನ್ನು ಇರುವುದೆಂದು ಹೇಳಿ ಹೊಗಳಲಾರೆ. ಆದುದರಿಂದಲೇ ನನಗೇನೂ ಸಂಭಾವನೆಯಿಲ್ಲ. ನನ್ನಷ್ಟಕ್ಕೆ ವೇದ ಮಂತ್ರ ಪೂರ್ವಕವಾಗಿ ಆಶೀರ್ವಾದ ಹೇಳಿ ಬಂದು

ಬಿಡುತ್ತೇನೆ, ನಮ್ಮ ಮನೆತನದಲ್ಲಿ ಬೆಳೆದು ಬಂದ ಈ ಪದ್ಧತಿಯನ್ನು ನಾನು ಬಿಡಲಿಲ್ಲ" ಎಂದನು.

ಈ ಮಾತು ಕೇಳಿ ಸುಕುಮಾರನಿಗೆ ಕಣ್ಣು ತೆರೆದಂತಾಯಿತು. ಅಲ್ಲಿಂದ ಎದ್ದು ಇಬ್ಬರೂ ಹಿಂದಿರುಗಿದರು. ಆಗ ರಾಜಗುರುಗಳು "ಸುಕುಮಾರಾ; ಈಗ ನಿಜವಾದ ರಾಜಭಕ್ತನನ್ನು ನೋಡಿದೆಯಷ್ಟೆ? ಅಂತಹವನು ಹೊಗಳಿದಾಗಲೇ ನೀನು ಸಂತೋಷಪಡಬೇಕು. ಉಳಿದವರ ಹೊಗಳಿಕೆಗಳೆಲ್ಲ ಹುರುಳಿಲ್ಲದ ಮಾತುಗಳೇ" ಎಂದರು.

ರಾಜಗುರುಗಳು ಮತ್ತೂ ಹೇಳಿದರು: "ಮನುಷ್ಯನು ಒಳ್ಳೆಯವನಾದರೂ ಕೆಟ್ಟವನಾದರೂ ಪ್ರತಿಯೊಬ್ಬನಿಂದಲೂ ಕಲಿತುಕೊಳ್ಳುವಂತಹುದು ಇದ್ದೇ ಇರುತ್ತದೆ. ರಾಜನು ಎಲ್ಲರಿಂದಲೂ ಕಲಿತುಕೊಳ್ಳಲು ಪ್ರಯತ್ನಿಸಬೇಕು."

ಈ ಮಾತು ಸುಕುಮಾರನಿಗೆ ಅಸಂದರ್ಭವೆನಿಸಿ, "ಅದು ಹೇಗೆ? ನಮ್ಮ ಕಾರಾಗೃಹದಲ್ಲಿ ಎಷ್ಟೋ ಅಪರಾಧಿಗಳಿದ್ದಾರೆ. ಅಂತಹವರಲ್ಲಿ ನಾನು ಕಲಿತುಕೊಳ್ಳುವಂತಹುದೇನಿದೆ?" ಎಂದು ಕೇಳಿದ. "ತೋರಿಸುತ್ತೇನೆ" ಎಂದು ಹೇಳಿ, ಮರುದಿನ ರಾಜಗುರುಗಳು ಸುಕುಮಾರನನ್ನು ಕಾರಾಗಾರಕ್ಕೆ ಕರೆದುಕೊಂಡು ಹೋದರು. ಅಲ್ಲಿರುವ ಅಪರಾಧಿಗಳಲ್ಲಿ ಒಬ್ಬನು ಕುದುರೆಗಳ ಕಳ್ಳ. ಅವನು ಅತ್ಯಂತ ಲಾಘವದಿಂದ ಎಂತಹ ಕುದುರೆಯನ್ನಾದರೂ ವಶಪಡಿಸಿಕೊಂಡು ಕ್ಷಣಮಾತ್ರದಲ್ಲಿ ಮಾಯವಾಗಿಬಿಡುವವನು.

"ಇವನ ಹತ್ತಿರ ಕುದುರೆಗಳನ್ನು ಕದಿಯುವ ವಿದ್ಯೆ ಕಲಿಯಬೇಕೇನು?" ಎಂದು ಸುಕುಮಾರನು ವ್ಯಂಗ್ಯವಾಗಿ ಕೇಳಿದನು.

"ಹಾಗಲ್ಲ, ಎಂತಹ ಹೊಸ ಕುದುರೆಯನ್ನಾದರೂ ಹೇಗೆ ವಶಪಡಿಸಿಕೊಳ್ಳಬೇಕೆಂಬ ವಿದ್ಯೆಯನ್ನು ರಾಜನು ಕಲಿಯಲೇ ಬೇಕು. ಕ್ಷಣಮಾತ್ರದಲ್ಲಿ ಮಾಯವಾಗುವಂತಹ ಕುದುರೇ ಸವಾರಿಯನ್ನು ಕಲಿಯಬಹುದು." ಎಂದರು ರಾಜಗುರುಗಳು ಗಂಭೀರರಾಗಿ.

ಅದರಂತೆ ಅನೇಕಬಾರಿ ರಾಜನ ಕೋಶಾಗಾರವನ್ನು ಹೊಕ್ಕು ಧನವನ್ನು ಕದ್ದ ಕಳ್ಳನ ಹತ್ತಿರ, ಬಲ



ವಾದ ಕಾವಲಿರುವ ಭವನಗಳೊಳಗೆ ಪ್ರವೇಶಿಸು ವಂತಹ ವಿದ್ಯೆಯನ್ನು ಕಲಿಯಬಹುದೆಂದು ರಾಜ ಗುರುಗಳು ಹೇಳಿದರು. ಪ್ರತಿಯೊಬ್ಬ ಕಳ್ಳನಿಂದಲೂ ಏನೋ ಒಂದು ಕಲಿಯುವಂತಹುದು ಇರುವುದೆಂದು ಹೇಳುತ್ತಾಹೋದರು.

ಕಡೆಗೆ ಕಾರಾಗೃಹದ ಅಧಿಕಾರಿ ಒಬ್ಬ ಅಪರಾಧಿ ಯನ್ನು ತೋರಿಸಿ, ಅವನ ವಿಷಯ ಹೇಳುತ್ತ. "ಇವನ ವಿಷಯದಲ್ಲಿ ಅಸಹ್ಯ ಪಡದವರು ಯಾರೂ ಇರ ಲಾರರು. ಇವನು ತನಗೆ ಮೇಲು ಮಾಡಿದವರಿಗೆ ಕೂಡಾ ಕೇಡು ಬಗೆಯುತ್ತಾನೆ. ಕೃತಜ್ಞತೆಯೆಂಬುದು ಇವನಲ್ಲಿ ಹುಡುಕಿದರೂ ಸಿಕ್ಕದು. ಯಾವ ಕ್ಷಣದಲ್ಲಿ ಏನು ತೋರುವುದೋ ಅದನ್ನು ಮಾಡಿಬಿಡುತ್ತಾನೆ. ಇವನು ಮಾನಭಂಗ ಮಾಡಿದ ಸ್ತ್ರೀಯರಿಗೆ ಲೆಕ್ಕವಿಲ್ಲ. ಎಷ್ಟೋ ಮನುಷ್ಯರು ಇವನಿಂದ ಪ್ರಾಣ ಕಳೆದು ಕೊಂಡಿದ್ದಾರೆ" ಎಂದನು.

"ಇಂಥವನನ್ನು ನೋಡಿ ಏನನ್ನು ಕಲಿಯ ಬಹುದು ?" ಎಂದು ಕೇಳಿದ ಸುಕುಮಾರ.

"ಮನುಷ್ಯನು ಏನೇನು ಮಾಡಬಾರದೆಂಬುದನು ಇವನಿಂದ ಕಲಿಯಬಹುದಲ್ಲವೆ ?" ಎಂದರು ರಾಜ ಗುರುಗಳು. ಕೂಡಲೇ ಸುಕುಮಾರನು ಗುರುಗಳಿಗೆ ಕೈಜೋಡಿಸಿ, "ನೀವು ಹೇಳಿದುದೆಲ್ಲವೂ ಅಕ್ಷರಶಃ ನಿಜವೇ. ಒಪ್ಪಿಕೊಳ್ಳುತ್ತೇನೆ" ಎಂದನು.

"ಇನ್ನೂ ಮುಗಿಯಲಿಲ್ಲ. ಈ ಅಪರಾಧಿಗಳಿಗೆಲ್ಲ ಈ ಕಾವಲು ಏತಕ್ಕೆ ಗೊತ್ತೇ ?" ಎಂದು ರಾಜ ಗುರುಗಳು ಕೇಳಿದರು.

"ಇವರು ತಪ್ಪಿಸಿಕೊಂಡುಹೋದರೆ ಪ್ರಜೆಗಳಿಗೆ ಅಪಾಯದಲ್ಲವೆ ? ಅದಕ್ಕಾಗಿ." ಎಂದ ಸುಕುಮಾರ.

"ನಾವು ಏನು ಮಾಡಬೇಕಾದರೂ ಭಗವಂತನ ಸಹಕಾರ ಅಗತ್ಯವಾಗಿರಬೇಕಷ್ಟೆ ? ಒಳ್ಳೆಯ ಕೆಲಸಕ್ಕೆ ಭಗವಂತನ ಸಹಕಾರ ಇದ್ದೇ ಇದೆ ಎಂದು ಗೊತ್ತಿರು ವಾಗ, ಅಪರಾಧಿಗಳಿಗೆ ಕಾವಲು ಕಾಯುವುದನ್ನು ಭಗವಂತನ ಮೇಲೆ ಹಾಕದೆ ಮನುಷ್ಯರ ಮೇಲೆ ಏಕೆ ಹಾಕಿರುತ್ತೇವೆ ?" ಎಂದು ರಾಜಗುರುಗಳು ಪ್ರಶ್ನೆ ಮಾಡಲು ಸುಕುಮಾರನು ಏನೂ ಹೇಳಲಿಲ್ಲ.

"ಅಂದರೆ, ನಮ್ಮ ಪ್ರಯತ್ನವಿಲ್ಲದುದಕ್ಕೆ ಭಗ ವಂತನ ಸಹಾಕಾರವಿರಲಾರದು. ಆದುದರಿಂದಲೇ !" ಎಂದರು ರಾಜಗುರುಗಳು.

ಈ ರೀತಿಯಾಗಿ ಸುಕುಮಾರನು ರಾಜಗುರು ಗಳಿಂದ ವಿಷಯಗಳನ್ನು ತಿಳಿದುಕೊಂಡು, ರಾಜನೀತಿ ಯನ್ನು ಕಲಿತನು. ರಾಜ್ಯಪಾಲನೆ ಸುಗಮವಾಗಿ ರಾಜ್ಯವು ಬಲವಾಯಿತು. ಶತ್ರುಗಳು ಅಲ್ಲಲ್ಲೇ ಮುದುಡಿದರು. ಆಮೇಲೆ ಅವನು ರಾಜ್ಯವನ್ನು ತುಂಬ ಅಭಿವೃದ್ಧಿಗೇರಿಸಿ, ತಂದೆಯನ್ನು ಮೀರಿಸಿದ ಮಗನೆಂದು ಒಳ್ಳೆಯ ಹೆಸರನ್ನೂ ಪಡೆದನು.





# ಇಬ್ಬರು ಮಂತ್ರಿಗಳು

ನೂರಾರು ವರ್ಷಗಳ ಹಿಂದೆ ಚಂದನಪುರವೆಂಬ ರಾಜ್ಯವನ್ನು ಸುಮಂತನೆಂಬ ರಾಜನು ಆಳುತ್ತಿದ್ದನು. ಈ ರಾಜನಿಗೆ ಅರವಿಂದಭಟ್ಟನೆಂಬ ಮಂತ್ರಿಯಿದ್ದನು. ಒಂದುಸಾರಿ ರಾಜನು ಆನೆ ಕುದುರೆಗಳ ವ್ಯವಹಾರವನ್ನು ಕುರಿತು ಮಾತಾಡಲು ಮಂತ್ರಿ ಅರವಿಂದಭಟ್ಟನನ್ನು ನೆರೆ ದೇಶಕ್ಕೆ ಕಳುಹಿಸಿಕೊಟ್ಟನು.

ಚಂದನಪುರದ ಮಲೆನಾಡುಗಳಲ್ಲಿ ಆನೆಗಳು ವಿಸ್ತಾರವಾಗಿದ್ದುವು. ಆದುದರಿಂದ ರಾಜನಬಳಿಯಲ್ಲಿ ಕುದುರೆಗಳಿಗಿಂತಲೂ ಆನೆಗಳೇ ಹೆಚ್ಚಾಗಿದ್ದುವು. ಅದಕ್ಕೆ ಸರಿಯಾಗಿ ಶಮಂತಿನಿ ಎಂಬ ದೇಶದಲ್ಲಿ ಆನೆಗಳು ಕಡಮೆಯಾಗಿ, ಕುದುರೆಗಳು ಹೆಚ್ಚಾಗಿದ್ದುವು.

ಆದುದರಿಂದ ಸುಮಂತನು ಮಂತ್ರಿ ಅರವಿಂದಭಟ್ಟನೊಂದಿಗೆ, " ನೀವು ಶಮಂತಿನಿಗೆ ಹೋಗಿ ನಮ್ಮ ಆನೆಗಳನ್ನು ಕೊಟ್ಟು ಬದಲಿಗೆ ಕುದುರೆಗಳನ್ನು ಕೇಳಿ ತರಬೇಕು. ಇದಕ್ಕೆ ಆ ರಾಜನನ್ನು ಒಪ್ಪಿಸಲು ನೀವೇ ಸಮರ್ಥರು " ಎಂದನು.

ಅದರಂತೆ ಅರವಿಂದಭಟ್ಟನು ಒಬ್ಬ ಸೇವಕನನ್ನು ಕರೆದುಕೊಂಡು ಶಮಂತಿನಿ ದೇಶಕ್ಕೆ ಹೋಗಿ ರಾಜನನ್ನು ಕಂಡು ಮಾತಾಡಿ ಕುದುರೆಗಳನ್ನು ಕೊಟ್ಟು ಆನೆಗಳನ್ನು ಕೊಂಡುಕೊಳ್ಳಲು ಒಪ್ಪಿಸಿದನು. ಶಮಂತಿನಿ ರಾಜನಿಗೆ ಮಂತ್ರಿಯಾದ ಆದಿಭಟ್ಟನು ಅರವಿಂದಭಟ್ಟನನ್ನು ಒಂದುದಿನ ತನ್ನ ಮನೆಯಲ್ಲಿ ಅತಿಥಿಯಾಗಿರಬೇಕೆಂದು ಕೇಳಿಕೊಂಡನು. ಅರವಿಂದಭಟ್ಟನೂ ಒಪ್ಪಿ ಅವನ ಮನೆಗೆಹೋದನು.

ಊಟ ಉಪಚಾರಗಳು ಮುಗಿದ ಮೇಲೆ ಇಬ್ಬರು ಮಂತ್ರಿಗಳೂ ಆರಾಮವಾಗಿ ಕುಳಿತು ಲೋಕಾಭಿರಾಮವಾಗಿ ಮಾತಾಡ ತೊಡಗಿದರು. ಆಗ ಆದಿಭಟ್ಟನು ಅರವಿಂದಭಟ್ಟನೊಂದಿಗೆ, " ನಮ್ಮ ರಾಜ ನನ್ನ ಕೈಯೊಳಗಿನ ಕೀಲುಬೊಂಬೆ. ನನ್ನ ಮಾತೆಂದರೆ ಅವನಿಗೆ ವೇದವಾಕ್ಯ ನಾನು ನಂದಿ ಅಂದರೆ ಅವನೂ ನಂದಿ ಅನ್ನುವನು, ಹಂದಿಯೆಂದರೆ ಅವನೂ ಹಂದಿಯೆನ್ನುವನು " ಎಂದನು.

ಆ ಮಾತನ್ನು ಅರವಿಂದಭಟ್ಟನು ನಂಬದೆ, " ಹಾಗಿರಲಾರದು " ಎಂದನು. " ಬೇಕಾದರೆ ನೀವು ಸ್ವಯಂ ತಿಳಿದುಕೊಳ್ಳಬಹುದು. ಈದಿನ ಸಾಯಂಕಾಲ ನಾನೂ ರಾಜನೂ ಅಲ್ಲಿ ಕಾಣುವ ಗುಡ್ಡದವರೆಗೆ ಗಾಳೀ ಸವಾರಿ ಹೋಗುತ್ತೇವೆ. ಆಗ ನೀವು ಎಲ್ಲಿಯಾದರೂ ಅಡಗಿ ಕುಳಿತಿದ್ದು ಏನು ನಡೆಯುವು

ಟಿ. ಮನೋಹರ



ದೆಂದು ಕಣ್ಣಾರೆ ನೋಡಿರಿ" ಎಂದ ಆದಿಭಟ್ಟ. ಅದಕ್ಕೆ ಒಪ್ಪಿ ಅರವಿಂದಭಟ್ಟನು ತನ್ನ ಸೇವಕನೊಂದಿಗೆ, ಆ ಗುಡ್ಡದ ದಾರಿಯಲ್ಲಿ ಹೋಗಿ, ಒಂದು ಮರದ ಹಿಂದೆ ಹೊಂಚಿ ನಿಂತನು. ಸ್ವಲ್ಪ ಹೊತ್ತಿಗೆಲ್ಲಾ ಕುದುರೆಗಳ ಮೇಲೇರಿಕೊಂಡು ಮುಂದಿನಿಂದ ಮಂತ್ರಿ ಆದಿಭಟ್ಟನೂ ಹಿಂದೆ ರಾಜನೂ ಬಂದರು. ಆ ಮರದ ಸಮೀಪ ಆದಿಭಟ್ಟನು ತನ್ನ ಕುದುರೆಯನ್ನು ನಿಲ್ಲಿಸಿ, ರಾಜನಿಗೆ ಒಂದು ಜೋಳದ ಹೊಲವನ್ನು ತೋರಿಸಿ, "ಹೊಲದಲ್ಲಿರುವ ಕಬ್ಬಿನ ಜಲ್ಲೆಗಳನ್ನು ನೋಡಿದಿರಾ ? ಏನು ಸೊಗಸು ! ಎಷ್ಟು ದಪ್ಪವಾಗಿವೆ ! ಇಷ್ಟು ದಪ್ಪವಾದ ಕಬ್ಬಿನ ಬೆಳೆ ಈ ವರೆಗೂ ಆದುದಿಲ್ಲ" ಎಂದನು.

ರಾಜನು ಅಕಡೆ ನೋಡಿ, "ಹೌದು ಹೌದು ! ಈಸಾರಿ ಕಬ್ಬಿನ ಜಲ್ಲೆಗಳು ಬಹಳ ದಪ್ಪ" ಎಂದನು.

ಅಷ್ಟರಲ್ಲಿ ಮಂತ್ರಿ ಆ ಕಡೆಯಲ್ಲಿ ಸಾಗುತ್ತಿದ್ದ ಒಂದು ಹಸಿರು ಹಾವನ್ನು ರಾಜನಿಗೆ ತೋರಿಸುತ್ತ, "ಅಲ್ಲಿ ನೋಡಿ ಮಹಾರಾಜರೇ. ಆ ಹೆಬ್ಬಾವು ಎಷ್ಟು ದಪ್ಪವಾಗಿದೆ !" ಎಂದನು.

"ಹೌದು. ಅಷ್ಟು ಭಾರಿಯಾದ ಹೆಬ್ಬಾವನ್ನು ನಾನು ಈವರೆಗೆ ನೋಡಲಿಲ್ಲ." ಎಂದ ರಾಜ. ಆಮೇಲೆ ಇಬ್ಬರೂ ಮುಂದಕ್ಕೆ ಸಾಗಿದರು.

ಈ ಸಂಭಾಷಣೆಯನ್ನು ಮರದ ಹಿಂದೆ ಹೊಂಚಿಕೊಂಡಿದ್ದ ಅರವಿಂದಭಟ್ಟನೂ ಅವನ ಸೇವಕನೂ ಕೇಳಿ ಆಶ್ಚರ್ಯಪಟ್ಟರು. ಅರವಿಂದಭಟ್ಟನು ಆದಿಭಟ್ಟನ ಮನೆಗೆ ಹಿಂದಿರುಗಿ, ತಾನು ಅವನಿಗಿಂತ ದೊಡ್ಡ ಮಂತ್ರಿ ಎಂಬುದನ್ನು ನಿರೂಪಿಸಬೇಕೆಂದು ನಿಶ್ಚಯಿಸಿಬಿಟ್ಟನು.

ಆದಿಭಟ್ಟನು ಅರಮನೆಯಿಂದ ತನ್ನ ಮನೆಗೆ ಬಂದು, ಅರವಿಂದಭಟ್ಟನೊಂದಿಗೆ, "ನೋಡಿದಿರಾ ನನ್ನ ಮಹತ್ವ ?" ಎಂದನು ಹೆಮ್ಮೆಯಿಂದ. ಅರವಿಂದಭಟ್ಟನು ನಿರ್ಲಕ್ಷ್ಯವಾಗಿ, "ಏನಾದರೂ ನೀವು ನನ್ನ ಸಮಾನರಾಗಲಾರಿರಿ. ನನಗೆ ಸಿಟ್ಟು ಬಂತೂ ಅಂದರೆ ನಮ್ಮ ರಾಜನನ್ನು ಬಾಯಿಗೆ ಬಂದ ಹಾಗೆ ಬೈದುಬಿಡುತ್ತೇನೆ. ಎಲ್ಲಾ ಕೇಳಿ ಸುಮ್ಮನಿರುತ್ತಾನೆ ರಾಜ. ಕಾರಣವೇನಂದರೆ ರಾಜನಿಗೆ ನನ್ನ ಮೇಲೆ ಗುರು ಭಕ್ತಿ ತುಂಬ ಇದೆ. ನನ್ನೊಂದಿಗೆ ಬಂದರೆ ನಿಮಗೆ ತೋರಿಸುತ್ತೇನೆ." ಎಂದನು.

"ನೋಡಬೇಕಾದ್ದೇ" ಎಂದು ಆದಿಭಟ್ಟನು ಅರವಿಂದಭಟ್ಟನೊಂದಿಗೆ ಹೊರಟನು. ಇಬ್ಬರೂ ಚಂದನಪುರವನ್ನು ಸೇರಿಕೊಂಡರು.

"ನಾನು ರಾಜನೊಂದಿಗೆ ಮಾತಾಡಲು ತೊಡಗುತ್ತೇನೆ. ಸ್ವಲ್ಪ ಹೊತ್ತಿನಲ್ಲಿ ಏನು ನಡೆಯುತ್ತದೆಂದು ನೋಡಿರಿ" ಎಂದು ಅರವಿಂದಭಟ್ಟನು ಆದಿಭಟ್ಟನೊಂದಿಗೆ ಹೇಳಿದನು. ಅವನು ರಾಜಭವನದ ತೆರೆಯ ಹಿಂದೆ ಆದಿಭಟ್ಟನನ್ನು ರಾಜನಿಗೆ ಕಾಣದಂತೆ ಕೂಡಿಸಿ, ತೆರೆಯ ಹೊರಬದಿಯಲ್ಲಿ ರಾಜನು ಕುಳಿತಿರುವಲ್ಲಿಗೆ ಹೋದನು.

ಏನು ಮಂತ್ರಿಗಳೇ. ನೀವು ಹೋದ ಕೆಲಸ ಏನಾಯಿತು ?" ಎಂದು ರಾಜನು ಅರವಿಂದಭಟ್ಟನನ್ನು ಕೇಳಿದನು. "ಕೆಲಸ ನಮ್ಮ ಮನಸ್ಸಿನಂತೆಯೇ ಆಯಿತು. ಆದರೆ ಈ ಪ್ರಯಾಣದಲ್ಲಿ ನನ್ನ ಶರೀರಕ್ಕೆ ಬಹಳ ಬಾಧೆಯಾಯಿತು. ನಿನ್ನ ಈ ಒಂದು ಸಣ್ಣ ಕೆಲಸ ಮಾಡಲು ನನ್ನನ್ನು ಕಳುಹಿಸಬೇಕೆ ? ಬುದ್ಧಿಯಿದೆಯೇ ನಿನಗೆ ? ಯಾವ ದೂತನನ್ನೋ ಕಳುಹಿಸದೆ, ನಿನ್ನ ಮಾತು ಕೇಳಿ ನಾನು ಹೊರಟದ್ದೇ ತಪ್ಪು. ನಿನಗೆ ವಯಸ್ಸು ಇಷ್ಟಾದರೂ ಬುದ್ಧಿ ಬೆಳೆಯಲಿಲ್ಲ. ಯಾವುದಕ್ಕೆ ಯಾರನ್ನು ಕಳುಹಿಸಬೇಕೆಂಬ ತಾರತಮ್ಯ ಜ್ಞಾನ ಇನ್ನೂ ಬರಲಿಲ್ಲ ನಿನಗೆ" ಎಂದನು.

ಇಂಥ ಮಾತುಗಳನ್ನು ಕೇಳಿ ರಾಜನು ತಲೆ ಆಡಿಸಿ ಕಿರುನಗೆ ನಕ್ಕುದನ್ನು ತೆರೆಯ ಸಂದಿನಿಂದ ನೋಡಿ, ಆದಿಭಟ್ಟನಿಗೆ ಮೂರ್ಛೆಬರುವ ಹಾಗಾಯಿತು.

ಸ್ವಲ್ಪ ಹೊತ್ತಿನಲ್ಲಿ ಅರವಿಂದಭಟ್ಟನು ಈಚೆಗೆ ಬಂದು ಆದಿಭಟ್ಟನೊಂದಿಗೆ, "ನಾನು ನಿಮಗಿಂತ ಹೆಚ್ಚಿನವನೆಂದು ಈಗ ಒಪ್ಪುವಿರಾ ?" ಎಂದು ಕೇಳಲು, "ಅದಕ್ಕೆ ಸಂದೇಹವೇ ಇಲ್ಲ. ನೀವು ಬಹಳ ದೊಡ್ಡವರು" ಎಂದ ಆದಿಭಟ್ಟ.

ಅಷ್ಟರಲ್ಲಿ ಅರವಿಂದಭಟ್ಟನ ಸೇವಕನು ಬಂದು ತನ್ನ ಯಜಮಾನನನ್ನು ಆಚೆಗೆ ಕರೆದುಕೊಂಡು ಹೋಗಿ, "ಅಯ್ಯಾ, ಶಮಂತಿನಿ ರಾಜನಿಗೆ ಕಣ್ಣು ಸರಿಯಾಗಿ ಕಾಣಿಸುವುದಿಲ್ಲವಂತೆ. ಅವರ ಮಂತ್ರಿಗಳ ಸೇವಕ ಈ ಸಂಗತಿ ಹೇಳಿದ. ಆದುದರಿಂದಲೇ ಆ ರಾಜರು ಜೋಳದ ಹೊಲವನ್ನು ಕಬ್ಬಿನ ಹೊಲವೆಂದೂ, ಹಸುರು ಹಾವನ್ನು ಹೆಬ್ಬಾವೆಂದೂ ಅಂದುಕೊಂಡಿರಬೇಕು" ಎಂದನು.

ಅಷ್ಟರಲ್ಲಿ ಆದಿಭಟ್ಟನ ಸೇವಕನು ಬಂದು ಆದಿಭಟ್ಟನನ್ನು ಮತ್ತೊಂದು ಕಡೆಗೆ ಕರೆದುಕೊಂಡು ಹೋಗಿ, "ಅಯ್ಯಾ, ಈ ದೇಶದ ರಾಜನಿಗೆ ಬ್ರಹ್ಮಕಿವುಡಂತೆ ಅವರ ಮಂತ್ರಿಗಳ ಸೇವಕನೇ ಈ ಸಂಗತಿ ಹೇಳಿದ." ಎಂದ.

ತಾವು ಮೋಸ ಹೋದೆವೆಂದು ಇಬ್ಬರು ಮಂತ್ರಿಗಳಿಗೂ ಸಿಟ್ಟು ಬಂದು ಆವೇಶ ಉಕ್ಕಿತು. ಅರವಿಂದಭಟ್ಟನು ಶಮಂತಿನಿಯ ರಾಜನಿಗೆ, ಆದಿಭಟ್ಟನು ಮಾಡಿದುದನ್ನೆಲ್ಲಾ ಪತ್ರದಲ್ಲಿ ಬರೆದು ಕಳುಹಿಸಿದನು. ಅದೇ ವಿಧವಾಗಿ ಆದಿಭಟ್ಟನು ಅರವಿಂದಭಟ್ಟನು ಹೇಳಿದುದನ್ನೆಲ್ಲಾ ವಿವರಿಸಿ ಸುಮಂತರಾಜನಿಗೆ ಪತ್ರ ಬರೆದು ಕಳುಹಿಸಿದನು.

ಈ ಪತ್ರಗಳ ಫಲಿತವಾಗಿ, ಇತ್ತ ಅರವಿಂದಭಟ್ಟನಿಗೂ, ಅತ್ತ ಆದಿಭಟ್ಟನಿಗೂ ಮಂತ್ರಿ ಪದವಿ ಹೋದುದುಮಾತ್ರವಲ್ಲದೆ ದೇಶದಿಂದ ಬಹಿಷ್ಕಾರವೂ ಆಯಿತು. ಅರ್ಥವಿಲ್ಲದ ಹೆಚ್ಚಳಿಕೆಯ ಫಲ ಇಬ್ಬರಿಗೂ ಸಿಕ್ಕಿತು.



# ಮಾಮೂಲು!

ಒಂದು ಊರಿನಲ್ಲಿ ಚಂದ್ರಯ್ಯನೆಂಬ ರೈತ ಕಾಯಕಷ್ಟದಿಂದ ಜೀವಿಸಿಕೊಂಡಿದ್ದ.

ಒಂದು ಸಾರಿ ಅವನು ಸೋರೆ ಬೀಜಗಳನ್ನು ಹಾಕಿ, ಮೊಳೆತ ಬಳ್ಳಿಗಳನ್ನು ಮನೆಯ ಮಾಡಿಗೆ ಬಿಟ್ಟು ಉಪಚಾರ ಮಾಡಿದನು. ಕ್ರಮೇಣ ಒಂಬತ್ತು ಸೋರೆಕಾಯಿಗಳು ಬೆಳೆದು ದೊಡ್ಡದಾದುವು. ಅವುಗಳಿಂದ ಬರುವ ಹಣವನ್ನು ನಂಬಿ ಹೊಸ ದುಪ್ಪಟ ಕೊಂಡುಕೊಳ್ಳಲು ಲೆಕ್ಕ ಹಾಕಿದನು. ಅವುಗಳನ್ನು ಕೊಯಿದು ಹಳೆಯ ದುಪ್ಪಟಿಯಲ್ಲಿ ಸುತ್ತಿ, ಸಮೀಪದಲ್ಲಿ ನಡೆಯುವ ಸಂತೆಗೆ ತೆಗೆದುಕೊಂಡು ಹೋದನು.

ಸಂತೆಯಲ್ಲಿ ತನ್ನ 'ಮಾಮೂಲು' ಎಂದು ಅಲ್ಲಿಯ ಕಾವಲುಗಾರ ಒಂದು ಸೋರೆಕಾಯಿ ತೆಗೆದುಕೊಂಡನು. ಅದರಂತೆ ಸರಕಾರೀ ಉದ್ಯೋಗಿ, ಮೇನೇಜರು, ಮೊದಲಾದ ಬೇರೆಬೇರೆ ಅಧಿಕಾರದವರು ಬಂದು ತಮ್ಮ ತಮ್ಮ ಮಾಮೂಲು ಎಂದು ಅವನನ್ನು ಬೆದರಿಸಿ ಒಂದೊಂದು ಸೋರೆಕಾಯಿ ಎಳೆದುಕೊಂಡು ಹೋದರು.

ಆ ಬಡರೈತ ಸಮೀಪದಲ್ಲಿದ್ದ ದೊಡ್ಡ ಅಧಿಕಾರಿಯ ಬಳಿಗೆ ಹೋಗಿ, ತನಗೆ ನಡೆದ ಅನ್ಯಾಯವನ್ನು ಕುರಿತು ಫಿರ್ಯಾದಿ ಮಾಡಿದನು. ಆ ಅಧಿಕಾರಿ ಕೋಪದಿಂದ, "ಬುದ್ಧಿಯಿದೆಯೆ? ಇಷ್ಟು ಮಂದಿ ಭಂಡರಿಗೆಲ್ಲ ಮಾಮೂಲು ಕೊಟ್ಟು ನನ್ನ ಹತ್ತಿರ ಬರಿಗೈಲಿ ಬರುವಿಯಾ? ಆ ದುಪ್ಪಟ ಇಲ್ಲಿಟ್ಟು ನಡೀ ಹೊರಗೆ!" ಎಂದು ಗರ್ಜಿಸಿದನು.

ಬೇರೇನೂ ತೋರದೆ ತನ್ನ ಕೈಯಲ್ಲಿ ಉಳಿದಿದ್ದ ಹಳೆಯ ದುಪ್ಪಟಿಯನ್ನು ಅಲ್ಲಿಟ್ಟು, ದುಃಖದಿಂದ ತನ್ನ ಮನೆಗೆ ಹಿಂದಿರುಗಿದ ಚಂದ್ರಯ್ಯ.





# ತೈಲದ್ವೇಷಿಣಿ

ಹಿಂದೆ ಒಂದು ಕಾಲದಲ್ಲಿ ಸೋನಾಪುರದಲ್ಲಿ ಒಬ್ಬಳು ರಾಜಕುಮಾರಿಯಿದ್ದಳು. ಬಹಳ ಸುಂದರಿಯೆಂದು ಖ್ಯಾತಳಾದವಳು. ಅವಳ ಸೌಂದರ್ಯಕ್ಕೆ ಮೂಲ ಕಾರಣವಾಗಿ ಬೆಳಗಿದುದು ಅವಳ ತಲೆ ಕೂದಲು. ಅದರಿಂದಲೇ ಅವಳಿಗೆ ಕೇಶವತಿ ಎಂಬ ಹೆಸರು ಬಂದಿತ್ತು. ಹನ್ನೆರಡನೆಯ ವಯಸ್ಸಿನಿಂದ ಅವಳ ತಲೆ ಕೂದಲು ಒತ್ತೊತ್ತಾಗಿ, ಕಪ್ಪಗೆ ಹೊಳೆದು ಉದ್ದುದ್ದವಾಗಿ ಬೆಳೆಯತೊಡಗಿದ್ದುವು. ಅವಳ ತಲೆ ಮುಡಿಯನ್ನು ಕುರಿತು ಎಲ್ಲರೂ ವರ್ಣಿಸುವರು.

ಒಬ್ಬಳೇ ಮಗಳಾದುದರಿಂದ ರಾಜದಂಪತಿಗಳು ಕೇಶವತಿಯನ್ನು ಬಹಳ ಶ್ರದ್ಧೆಯಿಂದ ಬೆಳೆಸಿದ್ದರು. ರಾಣಿಯಂತೂ ತನ್ನ ಕುಮಾರಿಗೆ ತಲೆ ಬಾಚಿ ಕೇಶಾಲಂಕರಣ ಮಾಡುವುದನ್ನು ದಾಸಿಯರಿಗೆ ಒಪ್ಪಿಸದೆ ತಾನೇ ಸ್ವತಃ ಮಾಡುತ್ತಿದ್ದಳು. ಅವಳು ಕೇಶವತಿಯ ತಲೆಗೆ ಶುದ್ಧವಾದ ತೆಂಗಿನೆಣ್ಣೆ ಮಾತ್ರ ಹಚ್ಚುತ್ತಿದ್ದಳು.

ಒಂದುದಿನ ಕೇಶವತಿ ಸುಮ್ಮನೆ ತಿರುಗಾಡುತ್ತ ಗಾಣಿಗರ ಕೇರಿಗೆ ಹೋದಳು. ಎತ್ತುಗಳು ಗಾಣ ತಿರುಗಿಸುವುದನ್ನೂ, ಒಣ ಕೊಬ್ಬರಿಗಳು ಗಾಣದೆಡೆಯಲ್ಲಿ ಸಿಕ್ಕಿ ನಲುಗುವುದನ್ನೂ, ಗಾಣದ ಕೆಳಗಿನಿಂದ ಎಣ್ಣೆ ಬೊಟ್ಟು ಬೊಟ್ಟಾಗಿ ಇಳಿಯುತ್ತಿರುವುದನ್ನೂ ನೋಡಿದಳು. ಇದನ್ನು ನೋಡುವಾಗ ಯಾಕೋ ಅವಳಿಗೆ ಎಣ್ಣೆಯ ಮೇಲೆ ಅಸಹ್ಯ ಹುಟ್ಟಿತು. ನೋಡುತ್ತಿದ್ದಂತೆ ಆ ಗಾಣದ ತುದಿಯಲ್ಲಿದ್ದ ಒಂದು ಹಲ್ಲಿ ಗಾಣದೊಳಗೆ ಬಿತ್ತು. ಅದನ್ನು ನೋಡಿ ಕೇಶವತಿ ಕಿಟ್ಟನೆ ಕಿರುಚಿ ಮೂರ್ಛೆ ಹೋಗಿ ಬಿದ್ದಳು.

ಪಾಲಕಿಯಲ್ಲಿ ಅವಳನ್ನು ಅರಮನೆಗೆ ಎತ್ತಿಕೊಂಡು ಬಂದು, ಉಪಚರಿಸಿ ಮೂರ್ಛೆ ತಿಳಿಸಿದ ಮೇಲೆ, ಅವಳಿಗೆ ಎಣ್ಣೆಯನ್ನು ನೆನೆಯಲಿಕ್ಕೇ ಸಾಧ್ಯವಾಗಲಿಲ್ಲ. ಅದನ್ನು ಜ್ಞಾಪಿಸಿಕೊಂಡರೆ ಅವಳಿಗೆ ವಾಂತಿ ಬರುವ ಹಾಗಾಗುತ್ತಿತ್ತು.

ಅಂದಿನಿಂದ ಅವಳು ತೆಂಗಿನೆಣ್ಣೆಯನ್ನು ತಲೆಗೆ ಹಚ್ಚಲು ಎಷ್ಟು ಮಾತ್ರಕ್ಕೂ ಒಪ್ಪಲಿಲ್ಲ. ತಾಯಿ ಎಷ್ಟೋ ವಿಧವಾಗಿ ಹೇಳಿ ನೋಡಿದಳು. ತಂದೆ ಹೇಳಿ ನೋಡಿದ್ದಾಯಿತು. ಅವಳು ಸುತಾರಾಂ ಒಪ್ಪಲಿಲ್ಲ. ಅದರ ಬದಲಿಗೆ ಬೇರೆ ಯಾವುದಾದರೂ ಎಣ್ಣೆ ಉಪಯೋಗಿಸಲು ಹೇಳಿದರೂ ಅವಳು ಒಪ್ಪಲಿಲ್ಲ. ಅವಳಿಗೆ ಎಲ್ಲಾ ಬಗೆಯ ಎಣ್ಣೆಗಳ ಮೇಲೆಯೂ ಅಸಹ್ಯ ಉಂಟಾಗಿತ್ತು.

ಪಿ. ಸಿ. ಸರ್ಕಾರ್, ಐಂದ್ರಜಾಲಿಕರು

ಎಣ್ಣೆಯ ಲೇಪವಿಲ್ಲದುದರಿಂದ ಅವಳ ಕೂದಲಿನ ಹೊಳಪು ಹೋಯಿತು. ಮುಖವು ಕಳೆಗೆಟ್ಟಿತು. ಸೌಂದರ್ಯಕ್ಕೇ ಧಕ್ಕೆ ಬಂದಿತು. ಅದಕ್ಕಾಗಿ ಅವಳು ಚಿಂತಿಸಲೂ ಇಲ್ಲ.

ತಾಯಿ ಮಗಳನ್ನು ಕುರಿತು, "ಹೀಗೆ ಹಟ ಮಾಡಿದರೆ ಹೇಗಮ್ಮಾ? ತಲೆ ಕೂದಲಿಗೆ ಎಣ್ಣೆ ಹಚ್ಚದೆ ಹೋದರೆ ಕೂದಲು ಬೆಳೆಯಲಾರದು. ಉದುರಿ ಹೋಗಲೂ ಬಹುದು. ತಲೆ ಕೂದಲು ಹುಲ್ಲಿನ ಹಾಗಿದ್ದರೆ ಏನೇನೂ ಚೆನ್ನಾಗಿರುವುದಿಲ್ಲ. ಇಷ್ಟು ಸಣ್ಣ ವಿಷಯ ಕೂಡ ನಿನಗೆ ಗೊತ್ತಾಗ ಬೇಡವೇ?" ಎಂದು ಬುದ್ಧಿ ಹೇಳಿದಳು.

"ನನಗೆಲ್ಲಾ ಗೊತ್ತಿದೆ. ತಲೆ ಕೂದಲಿಗೆ ಎಣ್ಣೆ ಹಚ್ಚುವುದರಿಂದ ಏನೂ ಪ್ರಯೋಜನವಿಲ್ಲ. ನಾನಿನ್ನು ಎಂದಿಗೂ ಎಣ್ಣೆ ಹಚ್ಚಿಕೊಳ್ಳಲಾರೆ, ತೋರಿಸುತ್ತೇನೆ ನೋಡಮ್ಮಾ" ಎಂದು ಹೇಳಿ ಕೇಶವತಿ ಒಂದು ಚಿಕ್ಕ ಗಿಡಕ್ಕೆ ನೀರಿಗೆ ಬದಲು ಎಣ್ಣೆಯನ್ನು ಎರೆದಳು. ಬೇಗದಲ್ಲೇ ಆ ಗಿಡವು ಸತ್ತುಹೋಯಿತು.

"ನೋಡಿದೆಯಾ ಅಮ್ಮಾ? ಬೆಳವಣಿಗೆಗೂ ಎಣ್ಣೆಗೂ ಯಾವ ಸಂಬಂಧವೂ ಇಲ್ಲ" ಎಂದು ಬಿಟ್ಟಳು. ಇಷ್ಟೊಂದು ಹಟಮಾರಿಯಾದ ಮಗಳಿಗೆ ರಾಣಿ ಏನುಮಾಡ ಬಲ್ಲಳು?

ರಾಜನೂ ಅವಳು ಎಣ್ಣೆ ಹಚ್ಚಿಕೊಳ್ಳುವಂತೆ ಏನೇನೋ ಹೇಳಿ ನೋಡಿದ. ರಾಜನ ಪ್ರೇರಣೆ ಯಿಂದ ಆಸ್ಥಾನ ವೈದ್ಯರು ಬಂದು, ಆಯುರ್ವೇದ ದೊಳಗಿನ ಕೆಲವು ಶ್ಲೋಕಗಳನ್ನು ವಿವರಿಸಿ, ಬೆಳೆಯು ವಂತಹ ತಲೆ ಕೂದಲಿಗೆ ಎಣ್ಣೆ ಅಗತ್ಯವೆಂದರು. ಆದರೆ ಕೇಶವತಿಯ ನಿರ್ಣಯವನ್ನು ಬದಲಾಯಿ ಸಲು ಅವರಿಗಾಗಲಿಲ್ಲ.

ಹೀಗೆ ಕೇಶವತಿ ಎಣ್ಣೆಯ ಮೇಲೆ ದ್ವೇಷಿಣಿಯಾಗಿ ರುವಳೆಂಬ ಸಮಾಚಾರ ರಜತಪುರದವರೆಗೆ ಹೋಗಿ ಮುಟ್ಟಿತು. ಅದು ಸೋನಾಪುರದ ನೆರೆಯಲ್ಲೇ ಇರುವ ದೇಶ. ಇಬ್ಬರು ರಾಜರೂ ಮಿತ್ರರಾಗಿದ್ದರು. ಕೇಶವತಿಯನ್ನು ರಜತಪುರದ ರಾಜಕುಮಾರ ಕಾಂಚನ ನಿಗೆ ಕೊಟ್ಟು ವಿವಾಹ ಮಾಡಬೇಕೆಂದು, ಎಂದೋ



ನಿಶ್ಚಯವಾಗಿದ್ದಿತು. ಆದುದರಿಂದ ರಾಜಕುಮಾರಿಯ ಪರಿಸ್ಥಿತಿಯನ್ನು ಕೇಳಿ ಕಾಂಚನನಿಗೂ ಅಲ್ಲಿಯ ಇತರರಿಗೂ ಚಿಂತೆಯಾಯಿತು.

ಈಗ ಕಾಂಚನಕುಮಾರ ಹದಿನೆಂಟು ವಯಸ್ಸಿನ ಯುವಕನಾಗಿದ್ದ. ಅವನು ಅನೇಕ ವಿದ್ಯೆಗಳಲ್ಲಿ ಜಾಣನಾಗಿದ್ದನು. ತನ್ನ ಹೆಂಡತಿಯಾಗಿ ಬರಲಿರುವ ಕೇಶವತಿಯ ಮೇಲೆ ಅವನಿಗೆ ತುಂಬ ಪ್ರೀತಿಯೂ ಅಭಿಮಾನವೂ ಇತ್ತು. ಅಂತಹವಳು ತೈಲದ್ವೇಷಿಣಿಯಾಗಿರುವಳೆಂದು ಕೇಳಿ ಮೊದಲು ಆಶ್ಚರ್ಯಪಟ್ಟನು. ಎಲ್ಲರ ಪ್ರಯತ್ನವೂ ನಿಷ್ಫಲವಾಯಿತೆಂದು ಕೇಳಿ, ತಾನು ಕೂಡಾ ಅವಳ ಮನಸ್ಸನ್ನು ಬದಲಾಯಿಸಲು ಪ್ರಯತ್ನ ಮಾಡಬೇಕೆಂದುಕೊಂಡು, ತಾನು ಅವಳನ್ನು ನೋಡಲು ಬರಬಹುದೇ ಎಂದು ಸೋನಾಪುರದ ರಾಜನಿಗೆ ಸುದ್ದಿ ಕಳುಹಿಸಿದನು. ಆಗತ್ಯವಾಗಿ ಬರುವಂತೆ ರಾಜನು ಉತ್ತರ ಕಳುಹಿಸಿದ.

ಕಾಂಚನಕುಮಾರನು ಬರುವನೆಂದು ಕೇಳಿ ಕೇಶವತಿ ಬಹಳ ಸಂತೋಷಪಟ್ಟಳು. ಚಿಕ್ಕತನದಲ್ಲಿ ಅವನು ಆಗಾಗ ಬಂದು ಹೋಗುತ್ತಿದ್ದನು. ಇಬ್ಬರೂ ಕೂಡಿ ಆಡಿ ಹರಟೆ ಹೊಡೆದವರು. ಆದರೆ ದೊಡ್ಡವರಾಗುತ್ತಾ ಬಂದಂತೆ ಅವರೊಳಗೆ ಸಲಿಗೆ ತಗ್ಗಿತ್ತು. ಕಾಂಚನನ ಬರುಹೋಗುವಿಕೆ ಅಪರೂಪವಾಗಿತ್ತು.

ಈ ಸಾರಿ ಕಾಂಚನಕುಮಾರನು ಬಂದು ಕೇಶವತಿಯೊಂದಿಗೆ ಹೊಸ ಬಗೆಯ ವಾದವನ್ನು ಪ್ರಾರಂಭ ಮಾಡಿದನು. "ಅಲ್ಲಾ ಕೇಶವತೀ, ನೀನು ಎಣ್ಣೆ ಬಿಟ್ಟ ಸಮಾಚಾರ ಕೇಳಿ ಬಹರ ಆಶ್ಚರ್ಯವಾಯಿತು. ಮೆದುಳಿನ ಕೆಲಸ ಚುರುಕಾಗಿ ಸಾಗಬೇಕಾದರೆ ಎಣ್ಣೆ ಆತ್ಯವಶ್ಯವೆಂಬ ಸಂಗತಿ ನಿನಗೆ ತಿಳಿಯದೇ? ಎಣ್ಣೆ ಮೆದುಳಿಗೆ ಉರುವಲಿದ್ದ ಹಾಗೆ" ಎಂದನು.

"ನಾನು ನಂಬುವುದಿಲ್ಲ. ತುಂಬಾ ಓದಿದ ಹರಿಶಾಸ್ತ್ರಿಗಳದು ನುಣ್ಣಗೆ ಬಟ್ಟ ತಲೆ. ಅವರು ಎಣ್ಣೆ ಹಚ್ಚಿಕೊಳ್ಳುವುದೇ ಇಲ್ಲ" ಎಂದಳು ಕೇಶವತಿ.

"ಈಗ ಎಣ್ಣೆ ಹಚ್ಚಿಕೊಳ್ಳದಿದ್ದರೇನಾಯಿತು? ಚಿಕ್ಕ ವಯಸ್ಸಿನಲ್ಲಿ ತಪ್ಪದೆ ಹಚ್ಚಿಕೊಳ್ಳುತ್ತಿದ್ದರು" ಎಂದ ಕಾಂಚನಕುಮಾರ.





"ಆದುದರಿಂದಲೇ ಅವರ ತಲೆ ನುಣ್ಣಗೆ ಬೋಳಾಯಿತು" ಎಂದಳು ಕೇಶವತಿ ನಗುತ್ತಾ.

"ನಗಬೇಡ. ಇರುವೆಗಳನ್ನು ನೋಡು. ಅತಿ ಚಿಕ್ಕ ಪ್ರಾಣಿಗಳಾದರೂ ಇರುವೆಗಳಿಗೆ ಬುದ್ಧಿ ಜಾಸ್ತಿ. ಒಂದು ಚುಕ್ಕೆ ಎಣ್ಣೆ ಕಂಡರೆ ಸಾಕು. ಎಷ್ಟೋ ಇರುವೆಗಳು ಅದನ್ನು ಮುತ್ತಿ ಕುಡಿದುಬಿಡುತ್ತವೆ" ಎಂದ ಕಾಂಚನಕುಮಾರ.

"ಹೌದು. ಅದನ್ನು ಅನೇಕ ಬಾರಿ ನಾನೂ ನೋಡಿದ್ದೇನೆ. ಸಕ್ಕರೆಗೆ ಕೂಡಾ ಇರುವೆಗಳು ಮುತ್ತುತ್ತವೆ. ಆದುದರಿಂದ ನಾನು ತಲೆಗೆ ಸಕ್ಕರೆಪಾಕ ಹಾಕಿಕೊಳ್ಳಬೇಕೇನು ಮೆದುಳು ಬೆಳೆಯಲಿಕ್ಕೆ?" ಎಂದು ಕೇಳಿದಳು ಕೇಶವತಿ.

ಇಂಥವಳನ್ನು ಸರಿಮಾಡಲು ಇನ್ನು ಮಾತಿನಿಂದ ಉಪಯೋಗವಿಲ್ಲವೆಂದು ಕಾಂಚನನಿಗೆ ತೋರಿತು. ಇಂದ್ರಜಾಲವನ್ನು ನೆನೆದುಕೊಂಡನು. ಇಂದ್ರಜಾಲದಿಂದಲೇ ಇವಳ ಮನಸ್ಸನ್ನು ಬದಲಾಯಿಸಬೇಕೆಂದು ನಿಶ್ಚಯಿಸಿಕೊಂಡು, "ಅದು ಹೋಗಲಿ ಕೇಶವತೀ, ನಾವು ಚಿಕ್ಕತನದಲ್ಲಿ ಎಷ್ಟು ಸಂತೋಷದಿಂದ ದಿನಗಳನ್ನು ಕಳೆದಿದ್ದೇವೆ ನೆನಪಿದೆಯೆ?" ಎಂದನು.

"ಇಲ್ಲದೇ ಏನು? ಅವೆಲ್ಲಾ ತುಂಬಾ ಚೆನ್ನಾದ ದಿನಗಳು. ಆಟವೇನು? ಓಟವೇನು? ಅವೆಲ್ಲ ಸುವರ್ಣದಂಥ ದಿನಗಳು!" ಎಂದಳು ಕೇಶವತಿ.

"ಹಾಗಾದರೆ ಈಗ ಆ ಬಗೆಯ ಯಾವುದಾದರೊಂದು ಪಂದ್ಯ ಕಟ್ಟಿ ಆಡೋಣವೆ?" ಎಂದು ಕೇಳಿದ ಕಾಂಚನಕುಮಾರ.

"ಈ ವಯಸ್ಸಿನಲ್ಲಿಯೋ? ನಿನಗೇನಾದರೂ ಹುಚ್ಚೇ? ನನ್ನಿಂದಾಗದು" ಎಂದಳು ಕೇಶವತಿ.

"ನೀನು ಆಡಬೇಡಬಿಡು. ನಾನು ಆಡುತ್ತಾ ಇದ್ದರೆ ನೋಡಬಹುದಷ್ಟೆ?" ಎಂದು ಕಾಂಚನಕುಮಾರ ಕೇಳಲು, "ಅಗತ್ಯವಾಗಿ ನೋಡುತ್ತೇನೆ. ಹಿಂದೆ ತೋರಿಸಿದ ಹಾಗೆ ಯಾವುದಾದರೂ ಇಂದ್ರಜಾಲ ವಿದ್ಯೆ ತೋರಿಸು. ನೋಡುವಾ ನಿನ್ನ ಪ್ರಭಾವ." ಎಂದಳು ಕೇಶವತಿ.

"ಹೊಸ ಇಂದ್ರಜಾಲ ತೋರಿಸುತ್ತೇನೆ, ಒಂದು ಷರತ್ತು. ಅದು ನಿನಗೆ ಒಪ್ಪಿಗೆಯಾದರೆ ನಾನು ಹೇಳಿದ ಕೆಲಸ ನೀನು ಮಾಡಬೇಕು" ಎನ್ನಲು, ಕೇಶವತಿ ಒಪ್ಪಿದಳು.

ಮರುದಿನ ಬೆಳಿಗ್ಗೆ ಕಾಂಚನಕುಮಾರನು ರಾಜನನ್ನೂ, ರಾಣಿಯನ್ನೂ, ಮಂತ್ರಿಗಳನ್ನೂ ಕರೆದುಕೊಂಡು ಇಂದ್ರಜಾಲ ತೋರಿಸಲು ಕೇಶವತಿಯ ಮಂದಿರಕ್ಕೆ ಬಂದನು. ಅವನು ಮೇಜಿಯ ಮೇಲೆ ಒಂದು ವಿಶಾಲವಾದ ನೀರಿನ ತೊಟ್ಟಿಯನ್ನು ಇಟ್ಟನು. ತರುವಾಯ ಒಂದು ದಪ್ಪವಾದ ರಟ್ಟಿನ ತುಂಡಿನಿಂದ ಒಂದು ಮೀನಿನ ಆಕಾರವನ್ನು ಕತ್ತರಿಸಿಕೊಂಡನು. ಆ ಮೀನಿನ ಆಕಾರದ ಉದ್ದ ಮೂರು ಅಂಗುಲವೂ, ಅಗಲ ಒಂದೂವರೆ ಅಂಗುಲವೂ ಇದ್ದಿತು. ಅದರ ನಡುವಿನಲ್ಲಿ ಒಂದು ರಂಧ್ರವೂ,

ಆ ರಂಧ್ರದಲ್ಲೊಂದು ಸೀಳಿಕೆಯೂ ಬರುವಂತೆ ಕತ್ತರಿಸಿದನು. ಈ ಮೀನಿನ ಆಕಾರವನ್ನು ರಾಜನಿಗೂ ರಾಣಿಗೂ ತೋರಿಸಿ, ಕೇಶವತಿಗೂ ನೋಡುವಂತೆ ಹೇಳಿ ಕೊಟ್ಟನು. ಆಮೇಲೆ ಅದನ್ನು ತೊಟ್ಟಿಯ ನೀರಿನಲ್ಲಿ ತೇಲುವಂತೆ ಇಟ್ಟು, "ಕೇಶವತಿ, ಈಗ ನೀನು ಈ ಮೀನಿನ ಬೊಂಬೆಯನ್ನು ಕೈಯಿಂದ ಮುಟ್ಟದೆ ದೂಡದೆ ಊದದೆ ಅದು ಈಜುತ್ತಾ ಚಲಿಸುವಂತೆ ಮಾಡಬಲ್ಲೆಯಾ?" ಎಂದು ಕೇಳಿದನು.

ಕೇಶವತಿ ಮುಂದೆ ಬಂದು ಬಹಳ ಹೊತ್ತು ಆ ಮೀನನ್ನು ನೋಡಿ, ತನ್ನಿಂದ ಸಾಧ್ಯವಿಲ್ಲವೆಂಬಂತೆ ತಲೆಯಾಡಿಸಿದಳು.

"ಹಾಗಾದರೆ ನಾನು ಮಾಡುವುದು ನಿನಗೆ ಒಪ್ಪಿಗೆಯಾದ ಪಕ್ಷದಲ್ಲಿ, ನಾನು ಹೇಳಿದಂತೆ ಮಾಡುತ್ತೇನೆಂದು ಹೇಳಿದ್ದೀಯೆ? ನೆನಪಿದೆಯಷ್ಟೆ?" ಎಂದು ಕೇಳಿದ ಕಾಂಚನಕುಮಾರ.

"ಇದೆ. ನೀನು ತೋರಿಸು ನಿನ್ನ ಇಂದ್ರಜಾಲ. ನೀನು ಮಾತ್ರ ಹೇಗೆ ಕದಲಿಸುವೆಯೋ ನೋಡುತ್ತೇನೆ" ಎಂದಳು ಕೇಶವತಿ.

ಕಾಂಚನಕುಮಾರನು ದೊಡ್ಡದೊಂದು ಸೀಸೆಯನ್ನು ಎತ್ತಿಕೊಂಡು ಅದರೊಳಗಿದ್ದ ಒಂದು ದ್ರವದ ಒಂದು ಚುಕ್ಕೆಯನ್ನು ಮೀನಿನ ಮಧ್ಯದಲ್ಲಿದ್ದ ರಂಧ್ರದಲ್ಲಿ ಹಾಕಿದನು. ಆಗ ರಟ್ಟಿನ ಮೀನು ಅದರಷ್ಟಕ್ಕೆ ಅದೇ ಈಜುತ್ತಾ, ಆಚೆಗೂ ಈಚೆಗೂ ತಿರುಗತೊಡಗಿತು. ಎಲ್ಲರೂ ಅದನ್ನು ನೋಡಿ ಸಂತೋಷಪಟ್ಟರು.

ಕೇಶವತಿ ಕೂಡಾ ಆನಂದದಿಂದ ಕಿರುನಗು ನಗುತ್ತ ಕಾಂಚನನನ್ನು ನೋಡಿ, "ಹೌದು. ನೀನು ಹೇಳಿದ ಹಾಗೆ ಮಾಡಬೇಕೆಂದೆಯಲ್ಲಾ? ನನ್ನನ್ನು ಏನು ಮಾಡಬೇಕೆನ್ನುವಿ?" ಎಂದು ಕೇಳಿದಳು.

"ಇಕೋ, ಈ ಸೀಸೆಯೊಳಗಿದ್ದ ಅದ್ಭುತವಾದ ದ್ರವದ ಮಹಿಮೆಯಿಂದಲೇ ರಟ್ಟಿನ ಮೀನು ಈಜಾಡಿತು. ನಾನು ಹೇಳುವುದೇನೆಂದರೆ ಈ ಅದ್ಭುತ ದ್ರವವನ್ನು ದಿನಾ ನೀನು ನಿನ್ನ ತಲೆ ಕೂದಲಿಗೆ ಹಚ್ಚಿಕೊಳ್ಳಬೇಕು. ಈ ಸೀಸೆಯ ದ್ರವ ತೀರಿದ ಕೂಡಲೇ, ಬೇರೆ ಸೀಸೆ ಕಳುಹಿಸುತ್ತೇನೆ. ಸರಿತಾನೇ?" ಎಂದ ಕಾಂಚನಕುಮಾರ.

"ಹಾಗೇ ಹಚ್ಚಿಕೊಳ್ಳುತ್ತೇನೆ". ಎಂದು ಕೇಶವತಿ ಆ ಸೀಸೆಯನ್ನು ತೆಗೆದುಕೊಂಡಳು. ಅದನ್ನು ನೋಡಿ ರಾಜನೂ ರಾಣಿಯೂ ಒಬ್ಬರ ಮುಖವನ್ನೊಬ್ಬರು ನೋಡಿ ನಕ್ಕರು. ಆ ಸೀಸೆಯಲ್ಲಿರುವುದು ಸುವಾಸನೆ ಸೇರಿಸಿದ ತೆಂಗಿನೆಣ್ಣೆಯೆಂಬುದು ಅವರಿಗೆ ಗೊತ್ತು. ಆ ತೆಂಗಿನೆಣ್ಣೆಯ ಚುಕ್ಕೆಯಿಂದಲೇ ರಟ್ಟಿನ ಮೀನು ನೀರಿನಲ್ಲಿ ಚಲಿಸಿತ್ತು. ಅದೇ ಈಗ ಮಗಳ ತಲೆ ಕೂದಲನ್ನೂ ಚೆನ್ನು ಮಾಡತೊಡಗಿ ಅವಳ ಸೌಂದರ್ಯವನ್ನು ಕಾಪಾಡಿತು.





# ರಾಜನಂತೆ ಪ್ರಜೆಗಳು

ಅದೊಂದು ಕಾಲದಲ್ಲಿ ವಿಜಯಪುರಿಯನ್ನು ಪಾಲಿಸಿಕೊಂಡಿದ್ದ ರಾಜನಾದ ವಿಕ್ರಮಸಿಂಹನು ಪ್ರಜಾ ಪರಿಪಾಲನೆಯಲ್ಲಿ ಬಹಳ ಸಮರ್ಥನಾಗಿದ್ದನು. ಕಾರಣವೇನೆಂದರೆ ಅವನ ಬಳಿಯಲ್ಲಿ ಬುದ್ಧಿವಂತರಾದ ಮಂತ್ರಿಗಳಿದ್ದರು. ರಾಜ ಮಂತ್ರಿಗಳು ಒಮ್ಮನಸ್ಸಿನವರಾಗಿದ್ದುದರಿಂದ ಆ ರಾಜ್ಯವು ಸುಖಶಾಂತಿಗಳಿಂದ ತುಂಬಿಕೊಂಡಿದ್ದಿತು.

ಒಂದುಸಾರಿ ವಿಕ್ರಮಸಿಂಹರಾಜನು ತನ್ನ ರಾಜ್ಯದಲ್ಲಿ ಪರ್ಯಟನೆ ಮಾಡಿಕೊಂಡಿದ್ದನು. ಆಗ ಯಾವುದೋ ಒಂದು ಮಾರು ಮೂಲೆಯ ಗ್ರಾಮದಲ್ಲಿ ಅತಿ ಪ್ರಾಚೀನವಾದ ಸೋಮನಾಥ ದೇವಾಲಯವಿರುವುದನ್ನು ನೋಡಿದನು. ಆಗ ಅದರ ಪೂರ್ವದ ಪ್ರಸಿದ್ಧಿ ಹೇಗಿತ್ತೆಂಬುದು ಅವನಿಗೆ ನೆನಪಾಯಿತು. ಅನೇಕ ಶತಮಾನಗಳ ಹಿಂದೆ ಅತ್ಯುಚ್ಚ ದಶೆಯಲ್ಲಿದ್ದ ಆ ದೇವಾಲಯ ಈಗ ತುಂಬ ಶಿಥಿಲವಾಗಿ ಹೋಗಿತ್ತು.

ಆ ದೇವಾಲಯದ ಸ್ಥಿತಿಯನ್ನು ನೋಡುತ್ತಾ ವಿಚಾರ ಮಗ್ನನಾದ ರಾಜನಿಗೆ, ಹೇಗಾದರೂ ಆ ದೇವಾಲಯವನ್ನು ಪುನರುದ್ಧಾರ ಮಾಡಿ ಹಿಂದಿನ ಖ್ಯಾತಿಯನ್ನು ಮುಂದುವರಿಸಬೇಕೆಂದು ತೋರಿತು. ಅವನು ಆ ವಿಷಯವನ್ನು ಕುರಿತು ಮಂತ್ರಿಗಳೊಂದಿಗೆ ಆಲೋಚನೆ ಮಾಡಿದನು. ಅದಕ್ಕೆ ಬಹಳ ಖರ್ಚು ತಗಲುವುದೆಂದೂ, ಆದರಿಂದ ಖಜಾನೆ ಬಡವಾಗಿ ಹೋಗಬಹುದೆಂದೂ ಮಂತ್ರಿಗಳು ಹೇಳಿದರು. ಆಲಯವನ್ನು ಜೀರ್ಣೋದ್ಧಾರ ಮಾಡಿದ ಮಾತ್ರಕ್ಕೆ ಏನೂ ಮಾಡಿದಂತಾಗದು. ಅದರ ಖರ್ಚಿಗೆ ಮಾನ್ಯಗಳನ್ನು ಬಿಡಬೇಕು. ಸುತ್ತು ಮುತ್ತಲಿನ ಗ್ರಾಮಗಳನ್ನು ಅಭಿವೃದ್ಧಿಗೆ ತರಬೇಕು. ಯಾತ್ರಿಕರ ಸೌಕರ್ಯಗಳಿಗೆ ಛತ್ರ, ಚಾವಡಿಗಳನ್ನು ಏರ್ಪಡಿಸಬೇಕು. ಆಲಯಕ್ಕೆ ಖ್ಯಾತಿ ಬರುವವರೆಗೆ ಅದಕ್ಕೆ ತಗಲುವ ಎಲ್ಲಾ ಖರ್ಚುಗಳನ್ನೂ ರಾಜನ ಖಜಾನೆಯಿಂದಲೇ ನಡೆಯಿಸಬೇಕು. ಇದನ್ನೆಲ್ಲ ವಿವರಿಸಿ ಮಂತ್ರಿಗಳು, "ಮಹಾರಾಜರೇ, ಪ್ರಸ್ತುತ ನಮ್ಮ ಕೋಶಾಗಾರದಲ್ಲಿ ಅಷ್ಟು ಶಕ್ತಿ ಸಂಚಯವಿಲ್ಲ" ಎಂದರು ಸ್ಪಷ್ಟವಾಗಿ.

"ಒಂದು ಒಳ್ಳೆಯ ಕಾರ್ಯವನ್ನು ಮಾಡಬೇಕೆಂದು ತೋರಿದಾಗ ಮಾಡದೆ ಹಿಂದೂಡಿದರೆ, ಅದು ಎಂದಿಗೂ ಸಾಧ್ಯವಾಗದು. ಈ ದೇವಾಲ

ಜಿ. ಶಿವಕುಮಾರ

ಯದ ಖರ್ಚಿಗಾಗಿ ಒಂದು ಹೊಸ ತೆರಿಗೆಯನ್ನು ಹಾಕೋಣ. ಈ ತೆರಿಗೆಯನ್ನು ಧನಿಕರ ಮೇಲೆಯೂ, ವ್ಯಾಪಾರಸ್ಥರ ಮೇಲೆಯೂ ಮಾತ್ರ ಹಾಕಬೇಕು. ಇದರಿಂದ ಸಾಮಾನ್ಯ ಪ್ರಜೆಗಳನ್ನು ಬಾಧೆಪಡಿಸಿದಂತಾಗುವುದಿಲ್ಲ.'' ಎಂದನು ರಾಜ.

ಈ ಆಲೋಚನೆ ಚೆನ್ನಾಗಿದೆಯೆಂದು ಮಂತ್ರಿಗಳು ಹೇಳಿದರು. ಮರುದಿನವೇ ಹೊಸ ತೆರಿಗೆಯ ವಿಷಯವನ್ನು ಕುರಿತು ದೇಶದೊಳಗೆಲ್ಲ ಡಂಗುರ ಸಾರಲಾಯಿತು. ಆಮೇಲೆ ಧನಿಕರ ಮೇಲೆಲ್ಲ ಹೊಸ ತೆರಿಗೆಯೊಂದು ಬಿದ್ದಿತು.

ಏನಾದರೂ ಹೊಸ ಶಾಸನವೊಂದು ಜ್ಯಾರಿಗೆ ಬಂದ ಸ್ವಲ್ಪ ಕಾಲದ ಮೇಲೆ ವಿಕ್ರಮಸಿಂಹ ರಾಜನು ವೇಷ ಬದಲಾಯಿಸಿಕೊಂಡು ನಗರದಲ್ಲೆಲ್ಲಾ ತಿರುಗಾಡಿ, ಪ್ರಜೆಗಳು ಆ ಶಾಸನವನ್ನು ಕುರಿತು ಏನು ಮಾತಾಡಿಕೊಳ್ಳುವರೆಂದು ತಿಳಿದುಕೊಳ್ಳುತ್ತಿದ್ದನು. ಈ ಅಭ್ಯಾಸದಂತೆ ಒಂದುದಿನ ರಾಜನು ವೇಷ ಬದಲಾವಣೆ ಮಾಡಿ ಕಿವಿ ತೀಡಿಕೊಂಡು ಬೀದಿಗಳಲ್ಲಿ ತಿರುಗತೊಡಗಿದನು. ಹೊತ್ತುಹೋದುದೇ ಗೊತ್ತಾಗಲಿಲ್ಲ. ಮಧ್ಯಾಹ್ನದ ಹೊತ್ತಿನಲ್ಲಿ ಒಂದು ಅಂಗಡಿಯ ಮುಂದೆ ನಿಂತುಕೊಂಡಿದ್ದ ಒಬ್ಬ ಯುವಕನು ಅಂಗಡಿಯವನೊಂದಿಗೆ ಏನೋ ಜಗಳ ಮಾಡುವದನ್ನು ರಾಜನು ನೋಡಿದನು. ಆ ಯುವಕನ ಮಾತುಗಳಿಂದ ಅವನು ಒಬ್ಬ ಧನಿಕನ ಮನೆಯಲ್ಲಿ ಕೆಲಸ ಮಾಡುವವನೆಂದು ತಿಳಿಯಿತು. ಹೊಸ ತೆರಿಗೆ ಬಂದುದರಿಂದ ಧನಿಕನು ಅವನಿಗೆ ಕೊಡುವ ಸಂಬಳವನ್ನು ತಗ್ಗಿಸಿದನಂತೆ. ಹೀಗೆ ವರಮಾನವು ಕಡಮೆಯಾಗಿರುವಾಗ, ವರ್ತಕನು ಮಾರುವ ಸಾಮಾನುಗಳ ಬೆಲೆ ಕಳೆದ ಸಾರಿಗಿಂತ ಹೆಚ್ಚಾಗಿರುವುದರಿಂದ ಆ ಯುವಕನಿಗೆ ಸಿಟ್ಟು ಬಂದಿರುವುದೆಂದು ರಾಜನಿಗೆ ಅರ್ಥವಾಯಿತು. ರಾಜನ ಇದಿರಿನಲ್ಲಿಯೇ ಆ ಯುವಕನು ತನಗೆ ಬೇಕಾದ ಸಾಮಾನುಗಳನ್ನು ಅರ್ಧದಷ್ಟು ಕಡಮೆ ಮಾಡಿಯೇ ಕೊಂಡುಕೊಂಡು ಅತೃಪ್ತಿಯಿಂದ ಗೊಣಗುತ್ತಾ ಹೊರಟುಹೋದ. ರಾಜನು ಆಲೋಚಿಸಿದ್ದು ತಾರುಮಾರಾಯಿತು.



ತಾನು ಧನಿಕರ ಮೇಲೆ ಮಾತ್ರ ತೆರಿಗೆ ಹಾಕಿದೆನೆಂದು ಅವನು ಅಂದುಕೊಂಡಿದ್ದ, ಆದರೆ ತೆರಿಗೆಯ ಭಾರವನ್ನು ಧನಿಕರು ಹೊರದೆ, ಸಾಮಾನ್ಯ ಜನರ ಮೇಲೆಯೇ ಹೊರಳಿಸಿದ್ದಾರೆ.

ರಾಜನು ಅರಮನೆಗೆ ಹಿಂದಿರುಗಿ ಬಂದು ಮಂತ್ರಿಗಳೊಂದಿಗೆ, "ಹೊಸ ತೆರಿಗೆಯನ್ನು ರದ್ದು ಮಾಡಿರುವುದಾಗಿ ಮತ್ತೆ ಪ್ರಕಟನೆ ಹೊರಡಿಸಿರಿ. ಸಾಮಾನುಗಳಿಗೆ ಬೆಲೆಯೇರಿಸಿದವರನ್ನು ಕಠಿನ ಶಿಕ್ಷೆಗೆ ಗುರಿಪಡಿಸುವುದಾಗಿಯೂ ಡಂಗುರ ಹೊಡೆಸಿರಿ" ಎಂದನು ನಿಶ್ಚಿತ ಸ್ವರದಿಂದ.

ಮಂತ್ರಿಗಳು, ರಾಜನು ನೋಡಿದ ವಿಷಯಗಳನ್ನು ತಿಳಿದುಕೊಂಡು, "ಹಾಗಾದರೆ ದೇವಾಲಯದ ಪುನರುದ್ಧರಣಕಾರ್ಯ ನಿಲ್ಲಿಸಿದಂತೆ ತಾನೇ ?" ಎಂದು ರಾಜನನ್ನು ಕೇಳಿದರು.

"ಇಲ್ಲಯಿಲ್ಲ ! ದೇವಾಲಯದ ಕೆಲಸ ನಿಲ್ಲಿಸಲಿಲ್ಲ. ಅದಕ್ಕೆ ತಗಲುವ ಖರ್ಚನ್ನು ನಾನೇ ಭರಿಸಿಕೊಳ್ಳುತ್ತೇನೆ. ಹೇಗೆಂದು ಕೇಳುವಿರಾ ? ನಮ್ಮ ಈ ಅರಮನೆಯಲ್ಲಿ ಪ್ರತಿನಿತ್ಯ ಅಪಾರ ಧನ ವೃಥಾ ಖರ್ಚಾಗುತ್ತದೆ. ರಾಜನೂ ಅವನ ಕುಟುಂಬ ಪರಿವಾರದವರೂ ಸಾಮಾನ್ಯ ಪ್ರಜೆಗಳ ಹಾಗೆ ಇರುವವರಾದರೆ ದೇವಾಲಯದ ಜೀರ್ಣೋದ್ಧಾರ ಕಾರ್ಯ ಸುಗಮವಾಗಿ ನಡೆಯುತ್ತದೆ. ದೇವಾಲಯದ ಕೆಲಸ ಮುಗಿಯುವವರೆಗಾದರೂ ನಾನೂ ನನ್ನವರೂ ಸಾಮಾನ್ಯ ಜೀವನವೆಂಬ ವ್ರತವನ್ನು ಕೈಗೊಳ್ಳುತ್ತೇವೆ. ಇದೇ ಸರಿಯಾದುದು" ಎಂದ ರಾಜ.

ಈ ಮಾತು ಕೇಳಿ ಮಂತ್ರಿಗಳು ಬೆರಗಾಗಿ "ಸರಿ, ಮಹಾರಾಜರೆ, ನಾವು ಕೂಡಾ ಔತಣ ವಿನೋದ ಮುಂತಾದುವುಗಳನ್ನು ಬಿಟ್ಟು, ನಮ್ಮ ಖರ್ಚುಗಳನ್ನು ಕೂಡಾ ತಗ್ಗಿಸಿ ದೇವಾಲಯದ ಕೆಲಸಕ್ಕೆ ಸಹಾಯಕರಾಗಿರುತ್ತೇವೆ." ಎಂದರು.

ಈ ಮಾತು ಕೇಳಿ ರಾಜನಿಗ ಬಹಳ ಸಂತೋಷವಾಯಿತು. ಮಂತ್ರಿಗಳು ತಾವಾಗಿಯೇ ತಮ್ಮ ಸಂಬಳದ ಹೆಚ್ಚಿನ ಭಾಗವನ್ನು ದೇವಾಲಯದ ಜೀರ್ಣೋದ್ಧಾರ ನಿಧಿಗೆ ಕೊಡ ತೊಡಗಿದರು. ಈ ಸಮಾಚಾರ ನಗರದೊಳಗೆಲ್ಲಾ ವ್ಯಾಪಿಸಿತು. ಪ್ರಜೆಗಳಲ್ಲಿ ಮುಖ್ಯರಾವರು ನಗರ ಬೀದಿಗಳಲ್ಲೆಲ್ಲಾ ಹುಂಡಿಗಳನ್ನಿಟ್ಟರು. ಅದರಲ್ಲಿಯೂ ಸಾರ್ವಜನಿಕರ ಹಣ ಬೀಳ ತೊಡಗಿತು.

ಈ ವಿಧವಾಗಿ ಅಪಾರ ಧನವು ಸೇರಿತು. ಸೋಮನಾಥ ದೇವಾಲಯವು ಹಿಂದಿಗಿಂತಲೂ ದೊಡ್ಡ ರೀತಿಯಲ್ಲಿ ಮತ್ತೆ ರೂಪುಗೊಂಡಿದ್ದಿತು. ದೇವಸ್ಥಾನಕ್ಕೆ ಬೇಕಾದ ಹಂಗು ಹವಣಿಗಳೆಲ್ಲವೂ ಏರ್ಪಟ್ಟುವು. ಬೇಗದಲ್ಲಿ ಅದು ಪ್ರಸಿದ್ಧವಾದ ಯಾತ್ರಾ ಸ್ಥಳವಾಯಿತು.





# ಪುರಾಣಶ್ರವಣ

ಒಂದು ಊರಿನಲ್ಲಿ ಒಬ್ಬ ಕಳ್ಳನಿದ್ದ. ಅವನಿಗೆ ನಾಲ್ಕು ಮಂದಿ ಗಂಡು ಮಕ್ಕಳು. ತನ್ನ ಮಕ್ಕಳಿಗೂ ಅವನು ಕಳ್ಳತನ ಮಾಡುವುದರಲ್ಲೇ ಪಳಗಿಸಿದ್ದನು. ಕಡೆಗೆ ದೊಡ್ಡ ಕಳ್ಳನು ಸಾಯುವ ಮೊದಲು ತನ್ನ ಮಗಂದಿರನ್ನು ಕರೆದು, "ನನ್ನ ಕಡೇ ಮಾತು ನೆನಪಿಟ್ಟುಕೊಳ್ಳಿ. ನೀವು ದೇವಾಲಯಗಳ ಕಡೆಗೆ ಹೋಗಲೇಬೇಡಿ. ಪುರಾಣ ಹರಿಕಥೆಗಳನ್ನೂ ಕೇಳಬೇಡಿ. ಎಚ್ಚರ !" ಎಂದು ಹೇಳಿ ಸತ್ತುಹೋದನು.

ಆಮೇಲೆ ಒಂದುದಿನ ಕಳ್ಳನ ನಾಲ್ಕು ಮಂದಿ ಮಗಂದಿರು ರಾಜನ ಕೋಟೆಯೊಳಗೆ ಕಳವು ಮಾಡಲು ಹೊರಟರು. ದಾರಿಯಲ್ಲೆಲ್ಲಿಯಾದರೂ ಪುರಾಣಪಠನ ಕಿವಿಗೆ ಬೀಳಬಹುದೆಂದುಕೊಂಡು ಕಿವಿಗೆ ಹತ್ತಿ ಇಟ್ಟುಕೊಂಡಿದ್ದರು. ಅವರು ಕೋಟೆಯ ಕಡೆಗೆ ಹೋಗುತ್ತಾ ಇರುವಾಗ, ಒಬ್ಬನ ಕಿವಿಯ ಹತ್ತಿ ಜಾರಿ ಹೋಯಿತು. ಅದೇ ಸಮಯದಲ್ಲಿ ಸಮೀಪದಲ್ಲಿದ್ದ ದೇವಾಲಯದಲ್ಲಿ ಪುರಾಣಪಠನ ನಡೆದುಕೊಂಡಿತ್ತು.

ಆಗ ಪುರಾಣ ಹೇಳುವವರು ಹೀಗೆ ಹೇಳುತ್ತಿದ್ದರು: "ದೇವತೆಗಳಾಗಲಿ, ದೆವ್ವ ಭೂತ ಪಿಶಾಚಿಗಳಾಗಲಿ ನಮ್ಮ ಲೋಕಕ್ಕೆ ಬಂದಾಗ ಅವರ ಪಾದಗಳು ಭೂಮಿಯ ಮೇಲೆ ತಾಕವು: ಅವರ ನೆರಳು ಭೂಮಿಯ ಮೇಲೆ ಬೀಳವು"

ಈ ಮಾತುಗಳನ್ನು ಕೇಳಿದ ಕಳ್ಳ, ಸಿಡಿಲು ಬಿದ್ದವನಂತೆ ನಡುಗಿ, ಕೆಳಗೆ ಬಿದ್ದ ಹತ್ತಿಯನ್ನು ಹೆಕ್ಕಿ ಕಿವಿಯೊಳಗೆ ತುರುಕಿಕೊಂಡು ಮುಂದಕ್ಕೆ ಹೋದ.

ತರುವಾಯ ಅವರು ಉಪಾಯವಾಗಿ ಕೋಟೆಯೊಳಗೆ ಹೊಕ್ಕು ಕಳವು ಮಾಡಿ, ಸುರಕ್ಷಿತವಾಗಿ ತಮ್ಮ ಮನೆ ಸೇರಿ, ಕಳವಿನ ವಸ್ತುಗಳನ್ನೆಲ್ಲ ಹುಗಿದಿಟ್ಟರು.

ಮರುದಿನ ಬೆಳಗಾದ ಮೇಲೆ ಖಜಾನೆಯಲ್ಲಿ ಕಳವಾದ ಸಂಗತಿ ರಾಜನಿಗೆ ತಿಳಿಯಿತು. ಕಳ್ಳರನ್ನು ಕಂಡುಹಿಡಿಯುವ ಕೆಲಸ ಮಂತ್ರಿಯ ಮೇಲೆ ಬಿತ್ತು. ಅವನು ಒಂದೊಂದೇ ವಿಚಾರಿಸಿಕೊಂಡು ಹೋದಾಗ, ಊರ ಹೊರಗೆ ತೆಂಗಿನ ತೋಟಗಳಾಚೆಗಿನ ಗುಡಿಸಲಿನಲ್ಲಿರುವ ನಾಲ್ಕು ಮಂದಿ ಅಣ್ಣತಮ್ಮಂದಿರು ಕಳ್ಳತನವೇ ವೃತ್ತಿಯಾಗಿರುವವರೆಂದು ತಿಳಿಯಿತು. ಕಳ್ಳತನದ ವಸ್ತುಗಳು ಅವರ ಬಳಿಯಲ್ಲಿರುವುದಿಲ್ಲವೆಂದೂ. ಆದುದರಿಂದಲೇ ಅವರನ್ನು ಹಿಡಿಯಲು ಸಾಧ್ಯವಾಗಲಿಲ್ಲವೆಂದೂ ಮಂತ್ರಿಗೆ ತಿಳಿಯಿತು. ಖಜಾನೆಯಲ್ಲಿ ಅವರೇ ಕಳ್ಳತನ ಮಾಡಿದ್ದರೆ ಆ

ಎಲ್. ನರಸಿಂಹಾಚಾರ್ಯ

ಸೊತ್ತುಗಳು ಕೂಡಾ ಗುಡಿಸಲಿನಲ್ಲಿರಲಾರದು. ಅವರನ್ನು ಹಿಡಿದು ವಿಚಾರಿಸಿದರೂ ಕಳವು ರುಜುವಾಗಲಾರದು. ಆದುದರಿಂದ ಅವರ ಕಳ್ಳತನವನ್ನು ನಿರೂಪಿಸುವುದರೊಂದಿಗೆ, ಕಳವಾದ ನಗನಾಣ್ಯಗಳನ್ನು ಕೂಡಾ ತಿರುಗಿ ಸಂಪಾದಿಸಲು ಮಂತ್ರಿ ಒಂದು ಉಪಾಯ ಮಾಡಿದ.

ಅವನು ಭಯಂಕರವಾದ ಕಾಳೀ ದೇವಿಯ ವೇಷ ಹಾಕಿಕೊಂಡ. ಅವನು ಕೈಯಲ್ಲೊಂದು ಕತ್ತಿ ಹಿಡಿದುಕೊಂಡು, ಅರ್ಧರಾತ್ರಿಯ ಹೊತ್ತಿನಲ್ಲಿ ಆ ಗುಡಿಸಲಿನ ಬಳಿಗೆ ಹೋಗಿ ಭೀಕರವಾಗಿ ಗರ್ಜಿಸಿದನು.

ಆ ಗರ್ಜನೆ ಕಿವಿಗೆ ಬಿದ್ದ ಕೂಡಲೇ ನಾಲ್ವರು ಅಣ್ಣ ತಮ್ಮಂದಿರೂ ದೀಪ ಬೆಳಗಿಸಿಕೊಂಡು ಹೊರಗೆ ಬಂದು, ಮಹಾಕಾಳಿಯ ಆಕಾರವನ್ನು ನೋಡಿ ಹೆದರಿದರು. "ಅಮ್ಮಾ, ತಾಯೇ! ನಮ್ಮಿಂದ ಏನಾಗಬೇಕು? ಈ ಸಮಯದಲ್ಲಿ ನಮ್ಮ ಮನೆಯ ಬಳಿಗೆ ಏಕೆ ಬಂದೆಯಮ್ಮಾ?" ಎಂದು ಕೇಳಿದರು.

ಮಂತ್ರಿ ಅದಕ್ಕೆ ಉತ್ತರವಾಗಿ, "ನಾನು ಮಹಾಂಕಾಳಿ! ದುರ್ಗೆ! ದುಷ್ಟರೇ! ನೀವು ನಮ್ಮ ರಾಜನ ಕೋಟೆಯೊಳಗೆ ಹೊಕ್ಕು ಕಳ್ಳತನ ಮಾಡಿದ್ದೀರಿ! ಸಹಿಸಲಾರೆ! ಅಲ್ಲಿ ಕದ್ದ ಸೊತ್ತನ್ನೆಲ್ಲಾ ಇಲ್ಲಿ ನನ್ನ ಮುಂದೆ ಹಾಕಿರಿ! ಇಲ್ಲದಿದ್ದರೆ ನಿಮ್ಮನ್ನು ಕಡಿದು ಹಾಕಿ ರಕ್ತ ಕುಡಿಯುತ್ತೇನೆ!" ಎಂದನು.

ಕಳ್ಳರಲ್ಲಿ ಮೂವರು ಮಾತ್ರ ಆ ಮಾತು ಕೇಳಿ ಗಡಗಡ ನಡುಗಿದರು. ಆದರೆ ನಾಲ್ಕನೇಯವನು ಮಾತ್ರ ಒಳಗೆ ಹೋಗಿ, ಬಲವಾದ ದೊಣ್ಣೆಯೊಂದಿಗೆ ಹೊರಗೆ ಬಂದು. "ಯಾರೋ ನೀನು ಕಳ್ಳ ಕೊರವಾ? ಓಡುವಿಯಾ, ತಲೆಯೊಡೆದು ಹಾಕಲೆ?" ಎಂದು ಕರ್ಕಶವಾಗಿ ಕೂಗಿದ.

ಕೂಡಲೇ ಮಂತ್ರಿ ಒಮ್ಮೆಲೇ ಓಟ ಕಿತ್ತ. ಈ ವಿಚಿತ್ರವನ್ನು ನೋಡಿ, ಉಳಿದ ಮೂವರು ಕಳ್ಳರು, ದೊಣ್ಣೆ ಹಿಡಿದ ತಮ್ಮ ಸಹೋದರನನ್ನು ನೋಡಿ, "ಆ ಬಂದವನು ಮನುಷ್ಯನೆಂದು ನಿನಗೆ ಹೇಗೆ ಗೊತ್ತಾಯಿತು?" ಎಂದು ಕೇಳಿದರು.

"ನಾವು ಕಳ್ಳತನಕ್ಕೆ ಹೋಗುವಾಗ ಆಕಸ್ಮಿಕವಾಗಿ ನನ್ನ ಕಿವಿಗೆ ಒಂದು ತುಂಡು ಪುರಾಣಬಿತ್ತು. ದೇವತೆಗಳೂ ದೆವ್ವಗಳೂ ಭೂಮಿಗೆ ಬಂದರೆ ಅವರ ಪಾದ ನೆಲದಲ್ಲಿರಲಾರದಂತೆ. ನೆರಳೂ ಬೀಳುವುದಿಲ್ಲವಂತೆ. ಈಗ ಬಂದವನ ಪಾದಗಳು ಭೂಮಿಯ ಮೇಲೇ ಇದ್ದುವು. ನೆರಳೂ ಭೂಮಿಗೆಬಿದ್ದಿತ್ತು" ಎಂದ ನಾಲ್ಕನೇ ಕಳ್ಳ. "ಎಲೆಲಾ! ನೀನು ಚೂರು ಮಾತ್ರ ಪುರಾಣ ಕೇಳಿದ್ದರಿಂದಲೇ ಇಷ್ಟು ದೊಡ್ಡ ಲಾಭವಾಗಿದ್ದರೆ ದಿನಾ ಪುರಾಣ ಕೇಳಿದರೆ ಇನ್ನೆಷ್ಟು ಲಾಭವಾದೀತು?" ಎಂದುಕೊಂಡು ಅವರೆಲ್ಲ ದಿನಾ ಪುರಾಣ ಶ್ರವಣಕೆ ತೊಡಗಿ, ಕಳ್ಳತನ ಬಿಟ್ಟು ಒಳ್ಳೆಯವರಾದರು.





# ಶಿವುಡನ ಕುರುಡು ಲಾಭ

ಒಂದು ಸಣ್ಣ ಹಳ್ಳಿಯಲ್ಲಿ ಒಬ್ಬ ಬೇಸಾಯಗಾರನಿಗೆ ಶಿವಪ್ಪನೆಂಬ ಶಿವುಡು ಮಗನಿದ್ದ. ಅವನ ತಾಯಿ ತೀರಿ ಹೋದುದರಿಂದ, ತಂದೆ ಎರಡನೇ ಮದುವೆ ಮಾಡಿ ಕೊಂಡಿದ್ದ. ಸವತಿ ತಾಯಿಗೆ ಶಿವಪ್ಪನ ಮೇಲೆ ಏನೂ ಪ್ರೀತಿ ಇದ್ದಿಲ್ಲ. ಅವನನ್ನು ತುಂಬ ಹಿಂಸಿಸುತ್ತಿದ್ದಳು. ಅವನು ಹೊಲದಲ್ಲಿ ಕಷ್ಟಕೆಲಸ ಮಾಡುತ್ತಿದ್ದರೂ, ಏನೂ ಕೆಲಸ ಮಾಡದೆ ತಿಂದು ತಿರುಗುವನೆಂದು ಮಲತಾಯಿ ಬಯ್ಯುವಳು, ಹೊಡೆಯುವಳು.

ಮಗನು ಪಡುವ ಕಷ್ಟವನ್ನು ತಂದೆ ನೋಡು ತ್ತಿದ್ದರೂ, ತನ್ನ ಎರಡನೇ ಹೆಂಡತಿಯ ಬಾಯಿಗೆ ಹೆದರಿ ಸುಮ್ಮನಿರುವನು. ಮನಸ್ಸಿನಲ್ಲೇ ಮಗನ ಮೇಲೆ ಅನುತಾಪ ಪಡುವನು.

ಒಂದುದಿನ ರಾತ್ರಿ ಶಿವಪ್ಪ ಪಶುಗಳ ಕೊಟ್ಟಿಗೆ ಯಲ್ಲಿ ಮಲಗಿದ್ದ. ಅವನಿಗೆ ಇನ್ನೂ ನಿದ್ದೆ ಹಿಡಿದಿರ ಲಿಲ್ಲ. ಆಗ ತನ್ನ ಚಿಕ್ಕಮ್ಮ ಕೈಯಲ್ಲಿ ಕೋಲು ಹಿಡಿದುಕೊಂಡು ಬರುತ್ತಿರುವುದನ್ನು ನೋಡಿದನು. ತನ್ನನ್ನು ಹೊಡೆದು ಕೊಲ್ಲಲಿಕ್ಕೆ ಬರುತ್ತಾಳೇನೋ ಎಂದು ಹೆದರಿ, ಅವನು ಸದ್ದು ಮಾಡದೆ ಎದ್ದು ಎತ್ತಲೋ ಓಡಿಹೋದನು.

ಎಲ್ಲಿಗೆ ಏನೆಂಬ ಗೊತ್ತುಗುರಿ ಇಲ್ಲದೆ ಮನೆಬಿಟ್ಟು ಓಡಿದ ಶಿವಪ್ಪ ಕಡೆಗೆ ಯಾವುದೋ ಒಂದು ನಗರ ವನ್ನು ತಲಪಿದ. ಆ ನಗರವನ್ನು ಪಾಲಿಸುವ ರಾಜನು ತುಂಬ ಸರಳ ಗುಣದವನಾಗಿದ್ದ. ಸ್ವಪ್ನ ಶಕುನ ಮೊದಲಾದುವುಗಳ ಮೇಲೆ ಅವನಿಗೆ ತುಂಬ ನಂಬುಗೆ ಯಿತ್ತು. ಅವನಿಗೆ ಮುಂಚಿನ ರಾತ್ರಿ ಒಂದು ಸ್ವಪ್ನ ಬಿದ್ದಿತ್ತು. ಅದರಲ್ಲಿ ತನ್ನ ಹಿರಿಯ ರಾಣಿಯ ಮಗ ಳನ್ನು ಕಿರಿಯ ರಾಣಿ ಕೊಲ್ಲಲು ಪ್ರಯತ್ನಿಸುವಂತೆ ಕನಸು ಕಂಡು, ಥಕ್ಕನೆ ಎಚ್ಚರವಾಗಿ, ಅದನ್ನೇ ಯೋಚಿಸಿಕೊಂಡು ಬೆಳಗು ಮಾಡಿದ್ದ.

ಬೆಳಗಾದ ಮೇಲೆ ರಾಜನು, ಸಭೆಯಲ್ಲಿ ಸಭಿಕ ರನ್ನುದ್ದೇಶಿಸಿ, "ನಿನ್ನೆ ರಾತ್ರಿ ನಾನು ಒಂದು ಸ್ವಪ್ನ ನೋಡಿದೆ. ಅದು ಎಂತಹ ಸ್ವಪ್ನವೆಂದು ಊಹಿಸಿ ಹೇಳಬೇಕು. ನಿಜ ಹೇಳಿದವರಿಗೆ ಸಾವಿರ ರೂಪಾಯಿ ಬಹುಮಾನ" ಎಂದನು.

ಯಾರೂ ಏನೂ ಹೇಳಲಾರದೆ ಸುಮ್ಮನಿದ್ದರು. ರಾಜನ ಬುದ್ಧಿವಂತಿಕೆ ಎಷ್ಟೆಂಬುದು ಎಲ್ಲರಿಗೂ ಗೊತ್ತಿತ್ತು. ಹೀಗೆ ಸಭೆಯವರು ಮಾತಾಡದೆ ಸುಮ್ಮ ನಿರುವುದನ್ನು ನೋಡಿ ರಾಜನು ಮಂತ್ರಿಯ ಕಡೆಗೆ

ಪಿ. ಎಂ. ಕೃಷ್ಣ

ತಿರುಗಿ, "ನನಗೆ ಬಂದ ಸ್ವಪ್ನ ಏನೆಂಬುದನ್ನು ಹೇಳುವವರು ಇಲ್ಲಿ ಯಾರೂ ಇಲ್ಲವೆಂದಾಯಿತು. ಈ ವಿಷಯುವನ್ನು ಡಂಗುರ ಹೊಡೆಸಿರಿ. ಬೇರೆ ಯಾರಾದರೂ ಹೇಳುವವರಿದ್ದಾರೋ ನೋಡುವ" ಎಂದನು.

ರಾಜಸೇವಕರು ಡಂಗುರ ಸಾರುವಾಗ ಕಿವುಡು ಶಿವಪ್ಪನು ಆ ನಗರಕ್ಕೆ ತಲಪಿದ್ದ. ಡಂಗುರದವರು ಹೇಳುವ ಮಾತು ಅವನಿಗೆ ಸರಿಯಾಗಿ ಕೇಳಿಸಲಿಲ್ಲ. ಪ್ರಜೆಗಳು ತಮ್ಮ ಕಷ್ಟಗಳನ್ನು ರಾಜನ ಹತ್ತಿರ ಹೇಳಬಹುದೆಂಬುದಕ್ಕೆ ಹೀಗೆ ಡಂಗುರ ಸಾರುವರೆಂದು ಅವನು ಅರ್ಥ ಮಾಡಿಕೊಂಡನು.

ಕೂಡಲೇ ಅವನು ರಾಜಭವನಕ್ಕೆ ದಾರಿ ಕೇಳಿ ತಿಳಿದುಕೊಂಡು ಅಲ್ಲಿಗೆ ಹೋದನು. ದ್ವಾರದಲ್ಲಿ ರಾಜಭಟರು ಅವನನ್ನು ತಡೆದು, "ಮಹಾರಾಜರ ಸ್ವಪ್ನವನ್ನು ಕುರಿತು ಹೇಳಬಲ್ಲೆಯಾ?" ಎಂದು ಕೇಳಲು "ಹೌದು" ಎಂದ ಶಿವಪ್ಪ.

ಭಟರು ಅವನನ್ನು ಕರೆದುಕೊಂಡು ರಾಜನ ಮುಂದೆ ನಿಲ್ಲಿಸಿದರು. "ಡಂಗುರ ಕೇಳಿ ಬಂದೆಯಾ?" ಎಂದು ರಾಜನು ಕೇಳಲು, "ಹೌದು" ಎಂದ.

"ಹಾಗಾದರೆ ನನಗೆ ಬಂದ ಕನಸು ಎಂತಹುದೆಂದು ಹೇಳು ನೋಡುವಾ" ಎಂದ ರಾಜ.

ಮಹಾರಾಜರು ಕಷ್ಟಗಳನ್ನು ಹೇಳಲು ಅಪ್ಪಣೆ ಮಾಡಿದರೆಂದು ತಿಳಿದು ಶಿವಪ್ಪನು, "ಏನು ಮಾಡುವುದು ಮಹಾಪ್ರಭುಗಳೇ? ಮಕ್ಕಳಿಗೆ ಸವತಿ ತಾಯಿ ಅಂತ ಒಬ್ಬಳು ಇದ್ದರೆ ಕಷ್ಟಗಳು ತಪ್ಪಲಾರವು. ಅಂತಹ ಮಕ್ಕಳನ್ನು ಕಂಡರೆ ಅವಳಿಗೆ ಆಗುವುದಿಲ್ಲ. ಅದನ್ನೆಲ್ಲಾ ಹೇಳಲಿಕ್ಕೆ ತಾವು ಅವಕಾಶ ಮಾಡಿದಿರಿ..." ಎಂದು ಇನ್ನೂ ಏನೋ ಹೇಳಲಿದ್ದನು.

ಅಷ್ಟರಲ್ಲಿ ರಾಜನು ಸಂತೋಷದಿಂದ ಮೈಮರೆತು "ಭೇಷ್! ಭಲೇ! ನನ್ನ ಸಭೆಯೊಳಗಿನ ಎಂತೆಂತಹ ಪಂಡಿತರಿಗೂ ಹೇಳಲಾಗದುದನ್ನು, ಸಾಮಾನ್ಯ ಹಳ್ಳಿಯ ಬಡವನೊಬ್ಬ ಹೇಳಿದ! ಎಲೋ, ಯಾರಲ್ಲಿ? ಇವನಿಗೆ ಸಾವಿರ ರೂಪಾಯಿಗಳಲ್ಲ, ಸಾವಿರ ವರಾಹಗಳನ್ನೇ ಕೊಟ್ಟು ಕಳಿಸು. ಹೋಗಪ್ಪ, ಚೆನ್ನಾಗಿ ಹೇಳಿದಿ" ಎಂದು ಅಪ್ಪಣೆ ಕೊಟ್ಟ.

ಮಹಾರಾಜರು ಪೂರ್ತಿ ತನ್ನ ಕಷ್ಟ ಕೇಳದೆಯೇ ಬಹುಮಾನದ ಗಂಟು ಕೊಡಿಸಿದುದನ್ನು ನೋಡಿ, ಶಿವಪ್ಪ ತುಂಬ ಸಂತೋಷಪಟ್ಟು, ತನ್ನ ಮನೆಗೆ ಹಿಂದಿರುಗಿ ಬಂದನು. ರಾಜನ ದಯೆ ತನ್ನ ಮೇಲಿದೆ ಎಂದು ತಿಳಿದರೆ ಚಿಕ್ಕಮ್ಮ ಏನೂ ಮಾಡಲಾರಳೆಂದು ಅವನಿಗೆ ಧೈರ್ಯ ಬಂದಿತು.

ಅವನು ತಂದೆಯ ಮುಂದೆ ಹಣದ ಗಂಟನ್ನಿಟ್ಟು ನಡೆದ ಸಂಗತಿಯನ್ನೆಲ್ಲಾ ಹೇಳಿದನು. ಅವನು ಅಂದುಕೊಂಡಂತೆಯೇ ಸವತಿ ತಾಯಿ ಅವನಿಗೆ ಕಷ್ಟ ಕೊಡುವುದನ್ನು ಬಿಟ್ಟು ಪ್ರೀತಿಯಿಂದ ಆದರಿಸತೊಡಗಿದಳು.



 Photo by Nellai A. Ganapathy



ಬಹುಮಾನ
ಪಡೆದ ಶೀರ್ಷಿಕೆ

ವರುಷಕ್ಕೊಮ್ಮೆ ಬರುವುದು

ಕಳುಹಿಸಿದವರು :
ಎಂ. ವಿಶಾಲಾಕ್ಷಿ

 Photo by Prabhakar Mahadik



ಬೆಂಗಳೂರು ವಿಶ್ವವಿದ್ಯಾಲಯ
ಬೆಂಗಳೂರು-೫೬.

**ದಿನಾ ಬರಬೇಕಾದುದು**

ಬಹುಮಾನ
ಪಡೆದ ಶೀರ್ಷಿಕೆ

## ಫೋಟೋ ಶೀರ್ಷಿಕೆಯ ಸ್ಪರ್ಧೆ :: ಬಹುಮಾನ ರೂ. ೨೦







★ ಮೇಲಿನ ಫೋಟೋಗಳಿಗೆ ಶೀರ್ಷಿಕೆಗಳು ಜನವರಿ ೧೫ ರೊಳಗೆ ತಲಪಬೇಕು.

★ ಶೀರ್ಷಿಕೆಗಳು ಒಂದಕ್ಕೊಂದು ಸರಿಹೊಂದುವಂತಿರಬೇಕು. ಶೀರ್ಷಿಕೆಗಳನ್ನು ಕಾರ್ಡಿನಲ್ಲೇ ಬರೆಯಬೇಕು. ಗೆದ್ದ ಶೀರ್ಷಿಕೆಗಳು ಮಾರ್ಚಿ '೭೫ ರ ಸಂಚಿಕೆಯಲ್ಲಿ ಪ್ರಕಟವಾಗುತ್ತವೆ.

# ಚಂದಮಾಮ

## ಈ ಸಂಚಿಕೆಯಲ್ಲಿರುವ ಕಥೆಗಳು:



ಎರಡನೇ ಹೊದಿಕೆಯ ಚಿತ್ರ:
ಡಾಲಿಯಾ

ಮೂರನೇ ಹೊದಿಕೆಯ ಚಿತ್ರ:
ಕುಮುದ


**Printed by B. V. REDDI at The Prasad Process Private Ltd., and Published by B. VISWANATHA REDDI for Chandamama Publications, 2 & 3, Arcot Roa' Madras-600026. Controlling Editor : 'CHAKRAPANI'**



# ಅವಳಿಮಕ್ಕಳ ಕಥೆ

Jan 1975

೨

[ತನ್ನ ಮಕ್ಕಳನ್ನು ಕಂಡು ಹಿಡಿದು ಕರೆತಂದವರಿಗೆ ರಾಜ್ಯವನ್ನು ಕೊಡುವುದಾಗಿ ರಾಜನು ಊರೆಲ್ಲಾ ಡಂಗುರ ಹೊಡೆಸಿದನು. ಅದನ್ನು ಕೇಳಿ ಭದ್ರಪುರದ ಮೂವರು ಅವಳಿಜವಳಿ ಸೋದರರು, ಉದಯನ, ನಿಶೀಥ, ಸಂಧ್ಯಾಕುಮಾರ ಎಂಬವರು, ರಾಜನ ಬಳಿಗೆ ಬಂದು, ರಾಜಕುಮಾರಿಯರ ಶೋಧನೆಗೆ ಹೊರಟರು.]—

ಬಿಳೀ ಕುದುರೆಯ ಮೇಲೆ ಉದಯನನು ಮುಂದಿದ್ದು ಹೋಗುತ್ತಿದ್ದನು. ಹಗಲು ಹೊತ್ತಿನಲ್ಲಿ ಅವನಿಗೆ ಎಲ್ಲವೂ ಚೆನ್ನಾಗಿ ಕಾಣಿಸುತ್ತಿತ್ತು. ಅವನ ಹಿಂದಿನಿಂದ ಸಂಧ್ಯಾಕುಮಾರನೂ, ನಿಶೀಥನೂ ತಮ್ಮ ಕುದುರೆಯ ಮೇಲೆ, ಅವನಷ್ಟೇ ವೇಗವಾಗಿ ಸಾಗುತ್ತಿದ್ದರು. ಅವರಿಗೆ ಕಣ್ಣುಗಳಿದ್ದರೂ ಹಗಲು ಹೊತ್ತಿನಲ್ಲಿ ಕುರುಡರೇ ಆದುದರಿಂದ, ಸ್ವಲ್ಪವೂ ತಡೆಬಡೆಯಿಲ್ಲದೆ ಅವರು ತಮ್ಮ ಕುದುರೆಗಳನ್ನು ಸಾಗಿಸಿಕೊಂಡು ಹೋಗುವುದು, ತಮ್ಮ ಕಿವಿಗಳ ಆಧಾರದಿಂದಲೇ. ಅವರ ಕಣ್ಣುಗಳಿಗೆ ದಾರಿ ಕಾಣಿಸದಿದ್ದರೂ ಮುಂದಿನಿಂದ ಹೋಗುತ್ತಿದ್ದ ಉದಯನನ ಕುದುರೆಯ ಗೊರಸಿನ ಸಪ್ಪಳವನ್ನನುಸರಿಸಿ, ಅವನಷ್ಟೇ ವೇಗವಾಗಿ ಅವರಿಬ್ಬರೂ ಸಾಗುತ್ತಿದ್ದರು. ಗೊತ್ತಿಲ್ಲದವರಿಗೆ ಅವರು ಹಗಲು ಕುರುಡರೆಂದು ಸ್ವಲ್ಪವೂ ತಿಳಿಯುತ್ತಿರಲಿಲ್ಲ.

ಹೀಗೆ ಹಗಲೆಲ್ಲಾ ದಾರಿ ಕ್ರಮಿಸಿ ಸೂರ್ಯನು ಮುಳುಗುವ ವೇಳೆ ಸಮೀಪಿಸುವುದನ್ನು ನೋಡಿ ಉದಯನನು, "ನನ್ನ ಕೆಲಸ ಮುಗಿಯಿತು ಸಂಧ್ಯಾ. ಇನ್ನು ನೀನು ದಾರಿ ತೋರಿಸಿ ಮುಂದೆ ಸಾಗಬೇಕು" ಎಂದು ಬದಿಗೆ ಸರಿದನು.



ಆ ಪ್ರಕಾರ ಸಂಧ್ಯಾನು ಮುಂದನಿಂದ ಸಾಗಲು, ಅವನ ಹಿಂದೆ ನಿಶೀಥನೂ, ನಿಶೀಥನ ಹಿಂದೆ ಉದಯನನೂ ತಮ್ಮ ತಮ್ಮ ಕುದುರೆಯನ್ನು ಸಾಗಿಸಿಕೊಂಡು ಹೋದರು. ಮುಂದೆ ಚೆನ್ನಾಗಿ ಕತ್ತಲೆ ಬಿದ್ದ ಕೂಡಲೇ ರಾತ್ರಿಯನ್ನು ಹಗಲಿನಂತೆ ನೋಡಬಲ್ಲ ನಿಶೀಥನು ಮುಂದೆ ಸೇರಿ ಅವನ ಹಿಂದೆ ಸಂಧ್ಯಾಕುಮಾರನಾದ.

ಆದರೂ ರಾತ್ರಿಯಲ್ಲಿ ಪ್ರಯಾಣ ಮಾಡುವುದನ್ನು ನಿಲ್ಲಿಸಿ ಎಲ್ಲಿಯಾದರೂ ವಿಶ್ರಾಂತಿ ತೆಗೆದುಕೊಳ್ಳ ಬೇಕೆಂದು ಅವರಿಗೆ ತೋರಿತು. ಆಗ ಹತ್ತಿರ ಹತ್ತಿರ ಅರ್ಧರಾತ್ರಿಯಾಗಿತ್ತು.

ಆ ಸಮಯದಲ್ಲಿ ಅವರು ಕಾಡಿನ ಮಧ್ಯ ದಲ್ಲಿದ್ದರು. ಅಲ್ಲಿ ವಿಶ್ರಾಂತಿಗೆ ತಕ್ಕ ಸ್ಥಳವಾವುದೂ ಕಾಣಿಸಲಿಲ್ಲ. ಎಲ್ಲಿ ಬೇಕಾದರೂ ವಿಶ್ರಾಂತಿ ಅನುಭವಿಸುವ ಅಭ್ಯಾಸ ಅವರಿಗಿದ್ದುದರಿಂದ ನಿಶೀಥನು, "ಸದ್ಯ ನೀವು ಈ ಮರದ ಮೇಲೆ ಹತ್ತಿ ಕೊಂಬೆಯ ಮೇಲೆ ಕುಳಿತುಕೊಳ್ಳಿರಿ. ನಾನು ಹೋ ಸಮೀಪವೆಲ್ಲಿಯಾದರೂ ಇದಕ್ಕಿಂತ ಒಳ್ಳೆಯ ಸ್ಥ ವಿರುವುದೋ ನೋಡಿ ಬರುತ್ತೇನೆ" ಎಂದ ಹೇಳಿದನು. ಅದರಂತೆ ಸಂಧ್ಯಾ, ಉದಯನರ ಮರದ ಮೇಲೆ ಹತ್ತಿದರು. ನಿಶೀಥನು ಅವ ಕುದುರೆಗಳನ್ನು ಅದೇ ಮರಕ್ಕೆ ಕಟ್ಟಿ ಹಾಕಿ, ತ ಕಪ್ಪು ಕುದುರೆಯ ಮೇಲೆ ಕುಳಿತುಕೊಂಡು ಸ್ಥ ಹುಡುಕುತ್ತ ಹೊರಟನು.

ಆ ಕಟ್ಟಿರುಳಿನ ರಾತ್ರಿಯಲ್ಲಿ ಹಗಲಿನಂತೆ ನೋ ಬಲ್ಲವನಾದ ನಿಶೀಥನು ಅರಣ್ಯದಲ್ಲಿ ಬಹಳ ದೂ ಹೋದನು. ಆಗ ಒಂದು ಕಡೆಯಲ್ಲಿ ಪಾಳುಬ ಮನೆಯೊಂದು ಕಂಡಿತು. ಅವನು ಅದರ ಬಾಗಿಲ ಹತ್ತಿರ ಹೋಗಿ ಕಿವಿಗೊಟ್ಟು ಆಲಿಸಿದನು. ಯಾ ಶಬ್ದವೂ ಕೇಳಿಸದಿರಲು ಬಾಗಿಲು ತಟ್ಟಿದನು. ಒಳ ನಿಂದ ಯಾವ ಪ್ರತ್ಯುತ್ತರವೂ ಬಾರದಿರಲು, ಕಿಟಕಿ ಬಳಿಗೆ ಹೋಗಿ ಬಗ್ಗಿ ನೋಡಿದನು. ಒಳಗೆ ಯಾರ ಇದ್ದಂತೆ ಕಾಣಲಿಲ್ಲ.

ಧೈರ್ಯ ಮಾಡಿ ಬಾಗಿಲು ದೂಡಿದ ಅದು ತೆರೆದುಕೊಂಡುದನ್ನು ನೋಡಿ ಆಶ್ಚರ್ಯ ವಾಯಿತು. ಅವನು ನಿಃಶಂಕೆಯಿಂದ ಒ ಪ್ರವೇಶಿಸಿ, ಯಾವ ಮೂಲೆಯನ್ನು ನೋಡಿದರ ಅಲ್ಲೆಲ್ಲಾ ಕೂದಲಿನಂತಹ ನಾರುಗಳು ಸುರುಳಿ ಸುರ ಯಾಗಿಯೂ ಸಿಕ್ಕು ಸಿಕ್ಕಾಗಿಯೂ ಬಿದ್ದಿದ್ದುವು. ಬ ಯಾವ ವಸ್ತುಗಳೂ ಅಲ್ಲಿ ಕಾಣಿಸಲಿಲ್ಲ. ಕೇ ನಾರು ಹಗ್ಗ ಹೊಸೆಯುವ ಕೊಟ್ಟಿಗೆಯಂತೆ ಕಾಲಿ ನಾರುಗಳೇ. ಬೀಗವಿಲ್ಲದ ಈ ಮನೆಯ ಯ ಮಾನನು ಯಾರೆಂದು ನೋಡಲು ಬಾಗಿಲಲ್ಲಿ ಕಾ ನಿಂತನು. ಬಾಗಿಲು ಸುಮ್ಮನೆ ಮುಚ್ಚಿಕೊಂ ಹೊರಗೆ ಹೋದ ಯಜಮಾನ ಬರಲೇಬೇಕಷ್ಟೆ?

ಬಹಳ ಹೊತ್ತು ದಾರಿ ನೋಡಿದರೂ ಯಾ ಬರುವ ಸುಳಿವು ಕಾಣಲಿಲ್ಲ. ಬಹುಶಃ ಯಾರೂ ನ

ರಿಲ್ಲದ ಪಾಳುಬಿದ್ದ ಮನೆಯಾಗಿರಬೇಕೆಂದು ತೋರಿತು. ಆದರೇನು, ರಾತ್ರಿ ಮಲಗಿ ನಿದ್ದೆ ಮಾಡಲು ಇದು ಒಳ್ಳೆಯ ಸ್ಥಳವೇ ಎಂದುಕೊಂಡನು. ಜನರಿಲ್ಲದ ಸ್ಥಳವಾದುದರಿಂದ ಎಷ್ಟು ಹೊತ್ತು ಬೇಕಾದರೂ ಇಲ್ಲಿರಬಹುದು. ಅವನು ತನ್ನ ಸೋದರರನ್ನು ಕರೆದು ತರಲು, ತನ್ನ ಕಪ್ಪು ಕುದುರೆಯಮೇಲೇರಿ ಕೊಂಡು ಬಂದ ದಿಕ್ಕಿಗೇ ಹಿಂದಿರುಗಿದನು.

ಅಷ್ಟರೊಳಗೆ ಉದಯನ ಸಂಧ್ಯಾರಿಗೆ ಬೇರೊಂದು ಅನುಭವವಾಗಿತ್ತು. ನಿಶೀಥನು ಅವರಿಬ್ಬರನ್ನೂ ಮರದ ಮೇಲೆ ಹತ್ತಿಸಿ, ಹೊರಟುಹೋದ ಮರು ನಿಮಿಷದಲ್ಲಿ, ಆ ಮರದ ಬುಡದಲ್ಲಿ ಏನೋ ಶಬ್ದ ವಾದುದನ್ನು ಅವರು ಕೇಳಿದರು. ಯಾವುದೋ ಹಾವು ಹರಣೆಗಳ ಸದ್ದು ಎಂದುಕೊಂಡು ಅವರಿಬ್ಬರೂ ನಿಶೀಥನು ಹಿಂದಿರುಗುವುದನ್ನು ಕಾದಿದ್ದರು. ಆಗ ಇದ್ದಕ್ಕಿದ್ದ ಹಾಗೆ ಉದಯನನಿಗೆ ತನ್ನ ಸೊಂಟಕ್ಕೆ ಏನೋ ಮುಟ್ಟಿದ ಹಾಗಾಯಿತು. ತನ್ನ ಕೈ ಬೆರಳಿ ನಿಂದ ಅದನ್ನು ಮುಟ್ಟಿ ನೋಡಿ ಆಶ್ಚರ್ಯಪಡುತ್ತ, "ಸಂಧ್ಯಾ, ಯಾವುದೋ ಉದ್ದುದ್ದವಾದ ನಾರು ನನ್ನ ಸೊಂಟವನ್ನು ಬಳಸುತ್ತಿದೆ," ಎಂದನು.

ಅವನ ಬಾಯಿಯಿಂದ ಹೊರಟ ಆ ಮಾತು ಮುಗಿಯುವುದರೊಳಗೆ ಸಂಧ್ಯನ ಬಾಯಿಯಿಂದಲೂ, "ಹೌದಲ್ಲ, ನನ್ನ ಸೊಂಟಕ್ಕೂ ಅಂತಹುದೇ ತಗ ಲುತ್ತಾ ಇದೆಯಪ್ಪಾ ! ನೀನು ಹೇಳಿದಂತೆ ಕದಲುತ್ತ ಇರುವ ನಾರುದಾರ ಸೊಂಟವನ್ನು ಬಳಸುತ್ತಾ ಇದೆ. ಏನಿದು ? ನಾರಿನಂಥ ಹುಳುಗಳೋ ಹಾವುಗಳೋ ಇರುವ ಹಾಗೆ ನಾವೆಲ್ಲಿಯೂ ಕೇಳಿಲ್ಲವಲ್ಲಾ ? ಈ ಮರವೇ ಇಂಥ ಬೀಳಲುಗಳಿಂದ ನಮ್ಮನ್ನು ಸುತ್ತುತ್ತ ಇದೆಯೋ ? ಇದೆಂಥ ಮರವೋ ಕಾಣೆವಲ್ಲಾ ? ನಿಶೀಥ ನನ್ನು ಹೋಗಲು ಬಿಡಬಾರದಿತ್ತು" ಎಂದ.

ಹೀಗೆ ಅವರು ಆಲೋಚಿಸಿಕೊಂಡಿದ್ದ ಹಾಗೆಯೇ, ಅವರ ಸೊಂಟಗಳು ಬಲವಾದ ದಾರಗಳಿಂದ ಬಿಗಿಯ





ಲ್ಪಟ್ಟು ಯಾವುದೋ ಶಕ್ತಿ ಕೆಳಕ್ಕೆ ಎಳೆಯುತ್ತಿರುವ ಅನುಭವವಾಯಿತು. ಕೈಗಳಿಂದ ಸುತ್ತಲೂ ತಡವಿ ನೋಡಿದರೆ, ಮರದ ಕಾಂಡಗೆಲ್ಲುಗಳ ಹೊರತು ಯಾವ ಪ್ರಾಣಿಯೂ ತಗಲಲಿಲ್ಲ.

ಹಾಗೆ ಅವರು ಕೆಳಕೆಳಗೆ ಜಾರುತ್ತಿರಲು, "ಸುಮ್ಮನೆ ಜಾರಿಬಿಡಿ. ತಡಕಾಡಿ ನೋಡಿದರೆ ನಾನು ಕಾಣಿಸುವೆನೆಂದುಕೊಂಡಿರಾ? ಎಂತೆಂಥಾ ಯೋಗಿಗಳ ಕಣ್ಣಿಗೂ ಕಾಣಲಾರದ ನಾನು ನಿಮ್ಮ ಕಣ್ಣಿಗೆ ಕಂಡುಬಿಡುವೆನೇನು? ಹುಚ್ಚಪ್ಪಗಳು!" ಎಂಬ ಮಾತು ಸಮೀಪದಲ್ಲೇ ಕೇಳಿ ಬಂತು.

ಈ ಮಾತು ಕಿವಿಗೆ ಬಿದ್ದ ಕೂಡಲೇ ಯಾವ ದೆವ್ವವೋ ಭೂತವೋ ತಮ್ಮನ್ನು ಈ ದಾರಗಳಿಂದ ಬಿಗಿದು ಎಳೆಯುತ್ತಿದೆ ಎಂದು ಅವರಿಗೆ ತೋರಿತು. ಆದರೆ ಏನು ಮಾಡಲಿಕ್ಕೂ ಅವರಿಗೆ ತೋರಲಿಲ್ಲ. ಎಳೆಯುವ ಆ ಶಕ್ತಿ ಅವರ ಶಕ್ತಿಗಿಂತಲೂ ಹೆಚ್ಚಿನದೇ. ಮರವನ್ನೇ ಎಳೆಯುವುದೇನೋ ಅನಿಸುತಿತ್ತು.

"ದುಷ್ಟನೇ; ಹೇಡಿಯೇ! ಅಡಗಿರುವ ಪಿಶಾಚಿಯೇ! ಈ ಸಮಯದಲ್ಲಿ ನಮ್ಮ ನಿಶೀಥನಿರುತ್ತಿದ್ದರೆ ನಿನ್ನ ಕಾಲು ಕಡಿಯುತ್ತಿದ್ದನು. ಅದೋ ಬರುತ್ತಿದ್ದಾನೆ ನಮ್ಮಣ್ಣ. ಅವನ ಕಣ್ಣಿಗೆ ಬೀಳುವುದರೊಳಗೆ ನಮ್ಮನ್ನು ಬಿಟ್ಟು ಹೋಗಿಬಿಡು. ಇಲ್ಲದಿದ್ದರೆ ನಿನ್ನನ್ನು ಯಮಲೋಕಕ್ಕೇ ಕಳುಹಿಸುತ್ತಾನೆ ನಮ್ಮಣ್ಣ" ಎಂದು ಅವನನ್ನು ಹೆದರಿಸಲು ನೋಡಿದರು.

ಅದಕ್ಕೆಲ್ಲ ಆ ಮಾಯಾವಿ ಹೆದರುವಂತೆ ಕಾಣಲಿಲ್ಲ. "ಓಹ್! ನಿಮ್ಮ ಸುಳ್ಳು ಬೆದರಿಕೆಗಳಿಗೆಲ್ಲ ಹೆದರುವ ಘಟವಲ್ಲ ಇದು. ನಿಮ್ಮ ಅಣ್ಣನಂಥವನು ಒಬ್ಬನೇಕೆ, ನೂರು ಮಂದಿ ಬಂದರೂ ನನ್ನನ್ನೇನೂ ಮಾಡಲಾರರು. ಪುಃ! ನಿಮ್ಮ ಅಣ್ಣ ಬರುವವರೆಗೆ ನಾನಿಲ್ಲಿ ಕಾದಿರುತ್ತೇನೆಂದುಕೊಂಡಿರಾ ಮೂರ್ಖರೇ? ಸದ್ಯ ನನಗೆ ನೀವಿಬ್ಬರೇ ಸಾಕು" ಎನ್ನುತ್ತಾ ಆ ತಂತ್ರದ ಮನುಷ್ಯ ಆ ಸೋದರರನ್ನು ತನ್ನ ಗಡ್ಡದ ಕೂದಲಿನ ಕೊನೆಯಲ್ಲಿ ಕಟ್ಟಿ ಎಳೆದುಕೊಂಡು ಲೀಲಾಜಾಲವಾಗಿ ನಡೆಯತೊಡಗಿದನು.

ಹೋಗುವ ಮೊದಲು, ಇನ್ನೊಂದು ಮಂತ್ರದ ಕೆಲಸವನ್ನೂ ಮಾಡಿದನು. ಆ ಮರಕ್ಕೆ ಕಟ್ಟಿದ್ದ ಎರಡು ಕುದುರೆಗಳ ಮೇಲೆ ಒಂದು ಭಸ್ಮವನ್ನು ಚೆಲ್ಲಿದನು. ಆ ಕೂಡಲೇ ಆ ಎರಡು ಕುದುರೆಗಳೂ ಮಾಯವಾಗಿ ಹೋದುವು.

ಹೀಗೆ ಆ ಮಾಯಾವಿ ಹೊರಟು ಹೋದ ಸ್ವಲ್ಪ ಹೊತ್ತಿಗೆ ನಿಶೀಥನು ಆ ಮರದ ಬಳಿಗೆ ಬಂದನು. ಅಲ್ಲೇನಿದೆ? ಕುದುರೆಗಳೂ ಇಲ್ಲ, ಮರದ ಮೇಲೆ ತನ್ನ ಸೋದರರೂ ಕಾಣೆ! ಇದೇನಾಶ್ಚರ್ಯ! ರಾತ್ರಿಯಲ್ಲಿ ಕುರುಡರಾದ ಅವರು ಕುದುರೆ ಹತ್ತಿ ಸವಾರಿ ಹೋಗುವುದೆಂದರೇನು? ಹಾಗಿರಲಾರದು. ಹಾಗಾದರೆ ಏನಾಯಿತು ಅವರಿಗೆ? ನಿಶೀಥನಿಗೆ ಏನೂ ತೋರಲಿಲ್ಲ. ಏನೇನೋ ಊಹನೆಗಳು. ಒಂದು ವೇಳೆ ತಾನು ಹಿಂದಿರುಗುವುದು ತಡ

ಆಯಿತೆಂದು ಅವರಿಗೆ ತೋರಿರಬಹುದು. ತನ್ನನ್ನು ಹುಡುಕುತ್ತಾ ಕುದುರೆಯ ಮೇಲೇರಿ ಎಲ್ಲಾದರೂ ಹುಡುಕಾಡುತ್ತಿರಬಹುದು. ಹೀಗೆಂದುಕೊಂಡು ಅವನು ಅವರನ್ನು ಹುಡುಕುತ್ತಾ, ಆಗಾಗ ಕರೆಯುತ್ತಾ ತನ್ನ ಕರೀ ಕುದುರೆಯ ಮೇಲೇರಿಕೊಂಡು, ಕಾಡಿನಲ್ಲಿ ತಿರುಗಾಡತೊಡಗಿದ.

ಹುಡುಕುತ್ತಾ ಅವನು ಅರಣ್ಯದಲ್ಲಿ ಎಲ್ಲಿ ತಿರುಗಿದರೂ ತನ್ನ ಸೋದರರ ಜಾಡು ತಿಳಿಯಲಿಲ್ಲ. ಆಗ ರಾತ್ರಿ ನಾಲ್ಕನೇ ಜಾಮಕ್ಕೆ ಕಾಲಿಡುವ ವೇಳೆಯೂ ಬಂದಿತು. ಇನ್ನು ಬೇಗನೇ ಬೆಳಕು ಹರಿಯಿತೆಂದರೆ ತಾನು ಕುರುಡನಾಗಿ ಒಂದಡಿ ಕೂಡಾ ನಡೆಯಲು ಸಾಧ್ಯವಾಗಲಾರದು. ಬೇಗಬೇಗನೇ ಕುದುರೆಯನ್ನು ಹುರಿದುಂಬಿಸಿ ಮತ್ತೊಮ್ಮೆ ಕಾಡೆಲ್ಲಾ ತಿರುಗಿದ.

ಕಡೆಗೆ ಅವನಿಗೊಂದು ಆಲೋಚನೆ ತಟ್ಟಿತು. "ಒಂದುವೇಳೆ ಅವರು ನಾನು ನೋಡಿ ಬಂದ ನಾರು ದಾರ ತುಂಬಿದ ಆ ಪಾಳು ಮನೆಗೇ ಹೋದರೇನೋ? ನಾನು ಹೋದ ದಾರಿ ತಿಳಿದು ಕುದುರೆಗಳು ಅವರನ್ನು ಅಲ್ಲಿಗೇ ಒಯ್ದುವೇನೊ?" ಈ ಆಲೋಚನೆ ಸ್ಫುರಿಸಿದ ಕೂಡಲೇ ಅವನು ಬಹುವೇಗವಾಗಿ ಆ ಪಾಳು ಮನೆಗೇ ಬಂದನು.

ಮೊದಲು ಆ ಮನೆಯ ಹೊರಭಾಗದಲ್ಲಿ ಅವರ ಕುದುರೆಗಳಿವೆಯೋ ಎಂದು ನೋಡಿದನು. ಅವೇನೂ ಅಲ್ಲಿ ಕಾಣದಿರಲು, ನಿರಾಶೆಯಿಂದಲೇ ಬಾಗಿಲು ದೂಡಿ ಒಳಗೆ ಹೋದನು. ಎದುರಿನಲ್ಲಿ ಕಂಡ ನೋಟ ನೋಡಿ, ಒಮ್ಮೆಗೇ ಅದುರಿಬಿದ್ದನು.

ದಪ್ಪವಾಗಿ ಸುರುಳಿಸುತ್ತಿದ್ದ ನಾರು ದಾರಗಳಿಂದ ಕಟ್ಟಲ್ಪಟ್ಟು ಉದಯನನೂ, ಸಂಧ್ಯಾನೂ ಆ ಕೋಣೆಯ ಮೂಲೆಯಲ್ಲಿ ನಿದ್ರೆ ಮಾಡಿಕೊಂಡಿದ್ದಾರೆ. ಅವರ ಸಮೀಪದಲ್ಲಿ ನೆಲದ ಮೇಲೆ ನೆತ್ತರಿನ ಚುಕ್ಕೆಗಳು ಹಸಿಯಾಗಿದ್ದುವು. ಅಯ್ಯೋ, ಇದೇನಾಯಿತು? ಉದಯನನಿಗೆ ಒಂದೇ ಕೈಯಿದೆಯಲ್ಲಾ! ಆದರೆ ಕತ್ತಿಯಿಂದ ಕೈಯನ್ನು ಕಡಿದ ಗುರುತು ಮಾತ್ರ ಆ ತೋಳಿನಲ್ಲಿರಲಿಲ್ಲ. ಇದೇನು ವಿಚಿತ್ರವೋ





ಘೋರವೋ ಮಾಯೆಯೋ? ಹೀಗಿದ್ದರೂ ಸುಖವಾಗಿ ನಿದ್ರೆ ಮಾಡಿಕೊಂಡಿದ್ದಾರೆಂದರೆ ಏನರ್ಥ?

ನಿಶೀಥನಿಗೆ ಬುದ್ಧಿ ಭ್ರಂಶವಾದಂತೆನಿಸಿ, ಧೈರ್ಯದಿಂದ ಸ್ಥಿಮಿತಕ್ಕೆ ಬಂದು, ಸೋದರರನ್ನು ಕರೆಯುತ್ತ ತಟ್ಟಿ ಎಬ್ಬಿಸಿದನು. ನಿಶೀಥನ ಧ್ವನಿ ಕೇಳಿದ ಕೂಡಲೇ ಅವರಿಗೆ ಪ್ರಾಣವೇ ಬಂದ ಹಾಗಾಯಿತು. "ಬಂದೆಯಾ ತಮ್ಮಾ ನಿಶೀಥಾ? ಆ ದುಷ್ಟ ಮಾಯಾವಿಯನ್ನು ತಪ್ಪಿಸಿಕೊಂಡು ಹೇಗೆ ಇಲ್ಲಿಗೆ ಬಂದೆಯಪ್ಪಾ? ನಿನ್ನನ್ನು ನೋಡುವೆವೆಂಬ ಆಶೆಯೇ ನಮಗಿರಲಿಲ್ಲ. ಹಾಗಾದರೆ ಇನ್ನೂ ನಮ್ಮ ಪುಣ್ಯವಿದೆ" ಎನ್ನುತ್ತಾ ಅವರು ನಿಶೀಥನನ್ನು ಭರದಿಂದ ಅಪ್ಪಿಕೊಂಡು ಕಣ್ಣೀರು ತುಂಬಿಕೊಂಡರು.

"ನಾವು ಯಾವುದಕ್ಕೂ ಹೆದರಬಾರದೆಂಬ ನಿಶ್ಚಯದಲ್ಲಿ ಹೊರಟವರು. ಹೆದರಬೇಡಿ. ನೀವು ಇಲ್ಲಿಗೆ ಹೇಗೆ ಬಂದಿರಿ? ಈ ನಾರು ಹಗ್ಗದ ಕಟ್ಟುಗಳೇನು? ಯಾರು ಆ ಮಾಯಾವಿ? ಅಣ್ಣಾ, ನಿನ್ನ ಕೈಯೇನಾಯಿತು? ಇಲ್ಲಿ ಕಾಣುವ ಈ ನೆತ್ತರಿನ ಗುರುತುಗಳು ಏನಿದು?" ಎಂದು ಅವಸರವಸರವಾಗಿ ಪ್ರಶ್ನೆಗಳನ್ನು ಮಾಡಿದ ನಿಶೀಥ.

"ಇದೆಲ್ಲಾ ನಮ್ಮ ದುರದೃಷ್ಟ, ಕೇಳು ತಮ್ಮಾ, ನೀನು ನಮ್ಮನ್ನು ಬಿಟ್ಟು ಹೋದ ಸ್ವಲ್ಪ ಹೊತ್ತಿಗೆಲ್ಲಾ, ನಮ್ಮನ್ನು ಯಾವನೋ ಮಾಯಾವಿ ಈ ಹಗ್ಗದಿಂದ ಸುತ್ತಿ ಕಟ್ಟಿ ಎಳೆದು ತಂದು ಈ ಮನೆಯಲ್ಲಿ ಹಾಕಿಬಿಟ್ಟ. ಆ ದುರಾತ್ಮ ಯಾವನೋ ನಮ್ಮನ್ನು ಎಲ್ಲಿಗೆ ಎಳೆದೊಯ್ಯುವನೋ ಒಂದೂ ತಿಳಿಯಲಿಲ್ಲ. ಯಾರಿಗೂ ಕಾಣುವವನಲ್ಲವಂತೆ ಯಾರಿಗೂ ಹೆದರುವವನಲ್ಲವಂತೆ. ಯಾವಾಗ ಬೆಳಗಾಗುತ್ತದೋ ಅಂತ ಎಚ್ಚರಿಕೆಯಲ್ಲೇ ಕಾದಿದ್ದೆವು. ನೀನು ಬಂದ ಶಬ್ದ ಕೇಳಿದರೂ ಆ ಮಾಯಾವಿಯೆ ಎಂದುಕೊಂಡು ನಿದ್ದೆ ಬಂದವರ ಹಾಗಿದ್ದೆವು. ಅದೋ ಬೆಳಗಾಗುತ್ತಾ ಬರುತ್ತಿದೆ. ಈಗ ತಾನೇ ನನಗೆ ಸ್ವಲ್ಪ ಸ್ವಲ್ಪ ಕಾಣುತ್ತದೆ" ಎಂದ ಉದಯನ.

ಆಮೇಲೆ ಸುಧ್ಯಾನು ಹೀಗೆಂದ: "ನಾನು ಸ್ವಲ್ಪ ಸ್ವಲ್ಪ ಅವನ ರೂಪಾಕಾರ ಗೊತ್ತು ಮಾಡಿಕೊಂಡೆ. ಅವನು ಒಂದು ಗೇಣಿನಷ್ಟೇ ಎತ್ತರವಿರುವ ಮನುಷ್ಯ. ವಿಚಿತ್ರವೆಂದರೆ ಅವನಿಗೆ ನೂರು ಗೇಣು ಉದ್ದವಾದ ಗಡ್ಡವಿದೆ. ಆ ಗಡ್ಡದ ಕೂದಲನ್ನು ಅವನು ತನ್ನಿಷ್ಟ ಪ್ರಕಾರ ಆಡಿಸಬಲ್ಲ. ಆ ಗಡ್ಡವನ್ನೆ ಅವನು ಮರದ ಮೇಲೆ ಕಳಿಸಿ ನಮ್ಮ ಸೊಂಟಕ್ಕೆ ಸುತ್ತಿಸಿ ಹೀಗೆ ಎಳೆದು ತಂದಿದ್ದಾನೆ. ಇಷ್ಟು ಹೊತ್ತಿನವರೆಗೂ ನಮ್ಮ ಬದಿಯಲ್ಲೇ ಮಲಗಿ ಗೊರಕೆ ಹೊಡೆಯುತ್ತಿದ್ದ. ಆಗ ನಾನು ಅವನನ್ನು ತಡವಿ ಅವನ ರೂಪಾಕಾರದ ಗುರ್ತು ಹಿಡಿದೆ. ಈಗ ತಾನೇ ಅವನು ಎದ್ದು ಎಲ್ಲಿಗೋ ಓಡಿದ. ಏಕೆಂದರೆ, ಅವನು ಎದ್ದ ಕೂಡಲೇ ಇಲ್ಲಿಯ ನೆಲದಲ್ಲಿ ಮನುಷ್ಯನ ಪಾದದ ಗುರ್ತು ಕಂಡಿರಬೇಕು. ಅವುಗಳನ್ನು ನೋಡಿ ಅವನು ಕೋಪದಿಂದ 'ಓಹೊ! ನಿಮ್ಮ ದೊಡ್ಡಣ್ಣನೋ



46

ಇಲ್ಲಿಗೆ ಬಂದು ಹೋದ ಹಾಗಿದೆ. ಎಲ್ಲಿಗೆ ಓಡಿ ಹೋದಾನು? ಈಗಲೇ ಅವನನ್ನೂ ಹಿಡಿದು ತಂದು ನಿಮ್ಮ ಜತೆ ಸೇರಿಸಿಬಿಡುತ್ತೇನೆ' ಎಂದು ಅವಸರದಲ್ಲಿ ಓಡಲು ನೋಡಿದ. ಆಗ ಅವನ ಗಡ್ಡಕ್ಕೆ ನಮ್ಮನ್ನು ಕಟ್ಟಿಕೊಂಡಿರುವುದನ್ನೇ ಮರೆತಿದ್ದ. ನನಗೆ ಮಹಾ ಕೋಪ ಬಂದು ಅವನ ಗಡ್ಡದ ಕೂದಲು ಹಿಡಿದು ಎಳೆದೆ. ನಾಲ್ಕಾರು ಕೂದಲು ನನ್ನ ಕೈಗೇ ಬಂದಿತು. ನೆಲದಲ್ಲಿ ರಕ್ತವೂ ತೊಟ್ಟಿಕ್ಕಿತು. 'ಏನು ಗರ್ವವೋ ನಿನಗೆ! ನನ್ನ ಗಡ್ಡ ಪೂರಾ ಎಳೆದು ಹಾಕುವೆಯಾ? ಏನು ಬಲವಪ್ಪ ನಿನ್ನದು!' ಎಂದು ತನಗೆ ತಾನೇ ಹೇಳಿಕೊಳ್ಳುವವನಂತೆ 'ಈ ಗಡ್ಡ ಪೂರಾ ಹೋಗುತ್ತಿದ್ದರೆ ನನ್ನ ಗತಿ ಏನಾಗುತ್ತಿತ್ತೋ? ಇದೇ ನನ್ನ ಜೀವ ಶಕ್ತಿ! ಛೀಛೀ! ಈ ಸೊಕ್ಕಿನ ಪಿಂಡದವ ನನ್ನ ನಾಲ್ಕು ಗಡ್ಡದ ಕೂದಲು ಕಿತ್ತು ಹಾಕಿದನಲ್ಲ! ಇನ್ನು ಅವು ಈ ಜನ್ಮದಲ್ಲಿ ಬೆಳೆಯಲಾರವು. ಅಷ್ಟರಲ್ಲೇ ಬಿಟ್ಟದ್ದು ನನ್ನ ಪುಣ್ಯ! ಈ ಪುಂಡನನ್ನು ಸುಮ್ಮನೆ ಬಿಡಬಾರದು' ಎನ್ನುತ್ತಾ ಜೇಬಿನಿಂದ ಒಂದು ಅಂಜನದ ಡಬ್ಬಿಯನ್ನು ತೆಗೆದ. ಗಡ್ಡ ಕಿತ್ತವನು ನಾನಾದರೂ ಅದರ ಶಿಕ್ಷೆ ಅನುಭವಿಸಿದವನು ಉದಯನ. ನಮ್ಮಿಬ್ಬರ ವ್ಯತ್ಯಾಸ ತಿಳಿಯದ ಅವನು ಆ ಅಂಜನವನ್ನು ಉದಯನನ ಒಂದು ತೋಳಿಗೆ ಪೂಸಿದ. ಮರುಕ್ಷಣದಲ್ಲಿ ಇವನ ಕೈ ಮಾಯವಾಗಿ ಹೋಯಿತು. ಅಷ್ಟಾದ ಮೇಲೆ ಅವನು ತನ್ನ ಗಡ್ಡವನ್ನು ನಮ್ಮನ್ನು ಕಟ್ಟಿದಲ್ಲಿಯವರೆಗೆ ಕತ್ತರಿಸಿಕೊಂಡು ಹೊರಟ. ಆಶ್ಚರ್ಯವೆಂದರೆ ಅವನ ಉದ್ದನ್ನ ಗಡ್ಡವು ಕತ್ತರಿಸಿದಷ್ಟು ಆ ಕೂಡಲೇ ಬೆಳೆದುಬಿಟ್ಟಿತು."

ಇದೆಲ್ಲಾ ಕೇಳಿ ನಿಶೀಥನಿಗಾದ ಆಶ್ಚರ್ಯಕ್ಕೆ ಅಳತೆ ಇರಲಿಲ್ಲ. "ಸರಿ. ಇನ್ನು ತಡಮಾಡಬಾರದು. ಅವನು ನಿನ್ನನ್ನು ಹುಡುಕುತ್ತ, ತಿರುಗಿ ತಿರುಗಿ ಬೇಸತ್ತು, ಬೇಗನೇ ಹಿಂದಿರುಗಿ ಬಂದುಬಿಡಬಹುದು. ಅವನ ಬೇಗಾಗಿ ಬಿಟ್ಟುದರಿಂದ, ನಿಶೀಥಾ, ಇನ್ನು



ನಿನ್ನಿಂದ ಏನುಮಾಡಲೂ ಸಾಧ್ಯವಿಲ್ಲ. ಆದುದರಿಂದ ನನ್ನ ಬದಲಿಗೆ ನಿನ್ನನ್ನು ಕಟ್ಟಿ ಸಂಧ್ಯಾನೊಂದಿಗೆ ಕೂಡಿಸುತ್ತೇನೆ. ಒಂದು ಕೈ ಮಾತ್ರ ಮೇಲಕ್ಕೆ ಕಾಣುವ ಹಾಗೆ ಎಚ್ಚರದಿಂದಿರು. ಆಮೇಲೆ ಏನಾಗುವುದೋ ನೋಡೋಣ. ಇವೆಲ್ಲಾ ಒಂದು ಆಟವೆಂದು ಭಾವಿಸೋಣ" ಎಂದ ಉದಯನ.

ಈ ಉಪಾಯಕ್ಕೆ ಮೂವರೂ ಒಮ್ಮನಸ್ಸಿನವರಾದರು. ಕೂಡಲೇ ನಿಶೀಥನು ಅವರ ಕಟ್ಟುಗಳನ್ನು ಬಿಚ್ಚಿದ. ಉದಯನನು ಎದ್ದು ತಾನು ಒಕ್ಕೈಯವನಾದರೂ, ಸೋದರರ ಸಹಾಯದಿಂದ, ನಿಶೀಥನನ್ನು ಕಟ್ಟಿ ಸಂಧ್ಯಾನೊಂದಿಗೆ ಕೂಡಿಸಿದ. ಮನೆಯ ಹೊರಗಿದ್ದ ನಿಶೀಥನ ಕುದುರೆಯನ್ನು, ಅಲ್ಲಿಗೆ ಸಮೀಪದಲ್ಲಿದ್ದ ಒಂದು ಗುಹೆಯೊಳಗೆ ಕಟ್ಟಿ ಹಾಕಿ, ತಾನು ಮಾತ್ರ ಮತ್ತೆ ಆ ಪಾಳುಮನೆಯ ಬಳಿಗೇ ಬಂದು, ಒಂದು ಪೊದರಿನ ಮರೆಯಲ್ಲಿ ಕುಳಿತನು. ಹೊತ್ತು ಏರುತ್ತಾ ಮಧ್ಯಾಹ್ನದ ವೇಳೆಯಾಯಿತು.

ಆಗ ಮಾರುದ್ದ ಗಡ್ಡದ ಗೇಣುದ್ದದ ಮನುಷ್ಯ, "ಹೋಗಲಿ ಎಲ್ಲಿಗೆ ಹೋದಾನು? ಇಂದಲ್ಲದಿದ್ದರೆ ನಾಳೆ. ನನ್ನ ಕೈಗೆ ಸಿಕ್ಕಿ ಬೀಳಲೇಬೇಕು. ಅಹ್ಹಹ್ಹ..." ಎಂದು ನಗುತ್ತ ಉದಯನನು ಅಡಗಿದ್ದ ಪೊದರಿನ ಬದಿಯಿಂದಲೇ ಹೋದ.

ಅವನು ಮನೆಯೊಳಗೆ ಹೊಕ್ಕ ಕೂಡಲೇ ಉದಯನನು, ಅಡಗಿದ್ದ ಸ್ಥಳದಿಂದ ಎದ್ದು ಬೆಕ್ಕಿನಂತೆ ನಡೆದು ಕಿಟಿಕಿಯ ಹತ್ತಿರ ನಿಂತು ಒಳಕ್ಕೆ ಹಣಿಕಿ ನೋಡಿದ. ಆಗ ಅದ್ಭುತ ನೋಟಗಳು ಕಾಣತೊಡಗಿದುವು. ನೆಲ ಬಳಿಯುವಂತಿದ್ದ ಗಡ್ಡದ ಗೇಣುದ್ದದ ಮನುಷ್ಯ ಜೇಬಿನಿಂದ ಯಾವುದೋ ಒಂದು ಪುಟ್ಟ ಡಬ್ಬಿಯಿಂದ ಏನೋ ತೆಗೆದು ಸಂಧ್ಯಾ ನಿಶೀಥರ ಮೇಲೆ ಚೆಲ್ಲಿದ. ಕೂಡಲೇ ಅವರಿಬ್ಬರೂ ಮಾಯವಾಗಿ ಹೋದರು. ಆಮೇಲೆ ಗಡ್ಡದವನು ತನ್ನ ಕೊರಳಿನಲ್ಲಿದ್ದ ಹಾರವನ್ನು ತೆಗೆದು ಗೋಡೆಯಲ್ಲಿದ್ದ ಕೊಕ್ಕೆಗೆ ಸಿಕ್ಕಿಸಿದ. ತತ್ ಕ್ಷಣವೇ ಗೇಣುದ್ದದ ಮನುಷ್ಯ ಸಾಧಾರಣ ಒಬ್ಬ ಮನುಷ್ಯನ ಪರಿಮಾಣದವನಾಗಿ ನಿಂತ. ಈಗ ಅವನಿಗೆ ನೆಲ ಬಳಿಯುವ ಗಡ್ಡದ ಕೂದಲುಗಳಿರಲಿಲ್ಲ. ಆಮೇಲೆ ಆ ಮನುಷ್ಯ ಒಂದು ಪಾತ್ರೆಯಿಂದ ಏನನ್ನೋ ತಿಂದು ತೇಗಿ ಒಂದು ಬದಿಯಲ್ಲಿ ಮಲಗಿ ಸ್ವಲ್ಪ ಹೊತ್ತಿಗೆ ಗೊರಿಕೆ ಹೊಡೆಯಲಿಕ್ಕೂ ತೊಡಗಿದ. ಇದೆಲ್ಲವನ್ನೂ ಕಿಟಿಕಿಯಿಂದ ನೋಡಿಕೊಂಡಿದ್ದ ಉದಯನ, ಈ ಸಮಯದಲ್ಲಿ ಮೆಲ್ಲಗೆ ಮನೆಯೊಳ ಪ್ರವೇಶಿಸಿ ಕೊಕ್ಕೆಯಲ್ಲಿರುವ ಹಾರವನ್ನು ತೆಗೆದ ತನ್ನ ಕೊರಳಿಗೆ ಹಾಕಿಕೊಂಡನು. ಆ ಕ್ಷಣವೇ ಅವನ ಮಾರುದ್ದ ಗಡ್ಡದ ಗೇಣುದ್ದದ ರೂಪದವನಾದನ ಈ ವಿಚಿತ್ರ ಬದಲಾವಣೆಯನ್ನು ನೋಡಿ ಉದಯ ನಿಗೆ ನಗುಬಂದಿತು. "ಓಹೋ! ಇದರಲ್ಲಿದೆಯೊ ನಿನ್ನ ರಹಸ್ಯ!" ಎಂದನು ಮನಸ್ಸಿನಲ್ಲೇ.

ಉದಯನನು ತನ್ನ ಅಂಗಿಯ ಜೇಬುಗಳನ್ನು ತಡ ನೋಡಿದ. ಒಂದು ಜೇಬಿನೊಳಗಿನ ಕಿರುಡಬ್ಬಿಯ ಬಿಳೀ ಬಣ್ಣದ ಭಸ್ಮವಿದ್ದಿತು. ಮರಕ್ಕೆ ಕಟ್ಟಿ ಕುದುರೆಗಳನ್ನೂ, ಮನೆಯೊಳಗಿನ ಮನುಷ್ಯರನ್ ಮೊದಲಿನ ಕುಳ್ಳ ಮಾಯ ಮಾಡಿದುದು ಈ ಭಸ ದಿಂದಲೇ. ಎರಡನೇ ಜೇಬಿನಲ್ಲಿ ಕೆಂಪು ಬಣ್ಣದ ಭಸ್ಮ ಡಬ್ಬಿಯಿದ್ದಿತು. ಉದಯನನ ಕೈಯನ್ನು ಹೋ ಲಾಡಿಸಿದ್ದು ಈ ಡಬ್ಬಿಯ ಅಂಜನವೇ. ಮೂರನ ಜೇಬಿನಲ್ಲಿ ಅಂತಹುದೇ ಮತ್ತೊಂದು ಹಸಿರ ಬಣ್ಣದ ಅಂಜನವಿದ್ದಿತು. ಇನ್ನೊಂದು ಕಪ್ಪು ಬಣ್ಣ ಅಂಜನ ಡಬ್ಬಿಯೂ, ಕರವಸ್ತ್ರವೂ ಆ ಜೇಬಿನ ದೊರೆತುವು. ಅವುಗಳು ಯಾವುದಕ್ಕೆ ಉಪಯೋ ವಾಗುತ್ತವೆಂಬುದು ಉದಯನನಿಗೆ ಗೊತ್ತಾಗಲಿಲ್ "ಅಂತೂ ನಿನ್ನ ಬಲ ನನ್ನ ಕೈಯಲ್ಲಿದೆ!" ಎಂ ಅವನನ್ನು ನೋಡುತ್ತ.

(ಇನ್ನೂ ಇದ






# ವೀರಹನುಮಾನ್

ಮಾಯಾವಿ ರಕ್ಕಸನ ಕೈಯಲ್ಲಿ ವಾಲಿ ಸತ್ತನೆಂದು ಸುಗ್ರೀವನೇ ಮೊದಲಾದವರು ನಂಬಿದರೂ, ವಾಲಿ ಸಾಯಲಿಲ್ಲ. ಅವನು ಮಾಯಾವಿಯನ್ನು ಕೊಂದು ವಿಜಯ ಗರ್ವದಿಂದ ಹಿಂದಿರುಗಿದನು. ಆಕಸ್ಮಿಕವಾಗಿ ಅಣ್ಣನನ್ನು ನೋಡಿದ ಸುಗ್ರೀವನು ಓಡಿಬಂದು ಇದಿರುಗೊಂಡು ಗೌರವದಿಂದಲೂ ವಿನಯದಿಂದಲೂ ವಾಲಿಗೆ ನಮಸ್ಕಾರ ಮಾಡಿದನು. ಆದರೆ ಬಹಳ ಕೋಪದಿಂದಿದ್ದ ವಾಲಿ ಸುಗ್ರೀವನಿಗೆ ಆಶೀರ್ವಾದ ಮಾಡುವ ಬದಲಿಗೆ, ಅವನನ್ನು ನಿಂದಿಸುತ್ತ ವಾಗ್ಬಾಣಗಳಿಂದ ನೋಯಿಸತೊಡಗಲು, ಸುಗ್ರೀವನು ತನ್ನ ತಲೆಯ ಮೇಲಿದ್ದ ಕಿರೀಟವನ್ನು ತೆಗೆದು ವಾಲಿಯ ಪಾದಗಳ ಮೇಲಿಟ್ಟು ಸಾಷ್ಟಾಂಗ ಬಿದ್ದನು.

ವಾಲಿಯ ಕೋಪವನ್ನು ತಣಿಸಬೇಕೆಂಬ ಉದ್ದೇಶದಿಂದ ಸುಗ್ರೀವನು, "ಅಣ್ಣಯ್ಯ, ನೀನು ಶತ್ರುವನ್ನು ಕೊಂದು ಹಿಂದಿರುಗಿ ಬಂದುದು ನನ್ನ ಮಹಾಭಾಗ್ಯವೇ ಸರಿ. ಇದಕ್ಕಿಂತ ಹೆಚ್ಚಿನ ಸಂತೋಷವು ನನಗೆ ಬೇರೇನಿದ್ದೀತು? ನಾನು ಆ ಬಿಲದ ಹೊರಗೆ ಬಹಳ ಕಾಲದವರೆಗೆ ನಿನ್ನ ದಾರಿಯನ್ನು ಕಾದು ನಿಂತೆ. ಆ ಗುಹೆಯೊಳಗಿನಿಂದ ರಕ್ತವು ಹರಿದು ಹೊರಗೆ ಬಂದಾಗ ನನಗಾದ ದುಃಖವನ್ನು ಏನೆಂದು ಹೇಳಲಿ? ಇನ್ನು ರಾಕ್ಷಸರ ಬಾಧೆ ಬರಬಾರದೆಂಬ ಉದ್ದೇಶದಿಂದ ಗುಹೆಯ ದ್ವಾರಕ್ಕೆ ಬಂಡೆ ಕಲ್ಲನ್ನು ಮುಚ್ಚಿ ಕಿಷ್ಕಿಂಧೆಗೆ ಹಿಂದಿರುಗಿ ಬಂದೆ. ರಾಜ್ಯಾಭಿಷೇಕವನ್ನು ನಾನಾಗಿ ಅಪೇಕ್ಷಿಸಲಿಲ್ಲ ಅಣ್ಣಾ. ಪೌರರೂ ಮಂತ್ರಿಗಳೂ ರಾಜನೊಬ್ಬ ಇರಲೇಬೇಕೆಂದು ಹಟ ಹಿಡಿದು ನನಗೆ, ರಾಜ್ಯಾಭಿಷೇಕ ಮಾಡಿಬಿಟ್ಟರು. ಇನ್ನೀಗ ನೀನೇ ರಾಜ. ನಾನು ಎಂದಿನಂತೆ ಯುವರಾಜನೇ. ಅಪಾರ್ಥ ಮಾಡಬೇಡ" ಎಂದನು.

ಆದರೆ ಸುಗ್ರೀವನ ಯಾವ ಮಾತೂ ವಾಲಿಯ ಕಿವಿಗೇರಲಿಲ್ಲ. ಅವನು ಎಲ್ಲರನ್ನೂ ಕರೆದು, ಅವರೆಲ್ಲರ ಇದಿರಿನಲ್ಲಿ ವಾಲಿಯನ್ನು ನಾನಾ ವಿಧವಾಗಿ ಜರೆಯತೊಡಗಿದನು:

"ಇವನೂ ನಾನೂ ಮಾಯಾವಿಯನ್ನು ಬೆಂಬತ್ತಿಕೊಂಡು ಹೋದೆವು. ಮಾಯಾವಿ ಒಂದು ಭಯಂಕರ

೩. ಸ್ನೇಹ ಸಾಧಕ



ವಾದ ಗುಹೆಯೊಳಗೆ ನುಗ್ಗಿದ. ಅವನನ್ನು ಕೊಂದ ಹೊರತು ಕಿಷ್ಕಿಂಧೆಗೆ ಹಿಂದಿರುಗುವುದಿಲ್ಲವೆಂದು ನಾನು ಶಪಥ ಮಾಡಿ, ಈ ಸುಗ್ರೀವನನ್ನು ಗುಹೆಯ ದ್ವಾರದ ಹತ್ತಿರವೇ ಕುಳಿತಿರುವಂತೆ ಹೇಳಿ ಒಳಗೆ ಹೋದೆ. ಆ ಬಿಲದೊಳಗೆ ಮಾಯಾವಿ ಸುಲಭದಲ್ಲಿ ನನಗೆ ಸಿಗಲಿಲ್ಲ. ಬಹಳ ಕಷ್ಟಪಟ್ಟು ಹುಡುಕಿ ಅವನನ್ನು ಹಿಡಿದು ಹೊಡೆದು ಕೊಂದು ಹಿಂದಿರುಗಿ ಬರುವಾಗ, ಗುಹೆಯ ದ್ವಾರವೇ ನನಗೆ ಕಾಣಿಸಲಿಲ್ಲ. ಸುಗ್ರೀವಾ ಎಂದು ಎಷ್ಟು ಕೂಗಿದರೂ ಮರುನುಡಿ ಬರಲಿಲ್ಲ. ಈ ದುರಾತ್ಮನು ರಾಜ್ಯದ ಆಸೆಯಿಂದ ಆ ಗುಹೆಯ ದ್ವಾರವನ್ನು ಬಂಡೆಗಲ್ಲಿನಿಂದ ಮುಚ್ಚಿ ನಾನು ಹೊರಗೆ ಬಾರದಂತೆ ಹಂಚಿಕೆ ಮಾಡಿದ್ದಾನೆ. ನಾನು ಆ ಬಂಡೆಗಲ್ಲನ್ನು ಒಡೆದು ಹೇಗೋ ಹೊರಗೆ ಬಂದೆ.'' ಎಂದನು.

ಹೀಗೆಂದು ವಾಲಿ ಸುಗ್ರೀವನನ್ನು ಘೋರ ಅಪರಾಧಿಯನ್ನಾಗಿ ಮಾಡಿ, ಉಟ್ಟ ಬಟ್ಟೆಯೊಂದಿಗೆ ಓಡಿಸಿಬಿಟ್ಟನು. ಸುಗ್ರೀವನು ಓಡಿಹೋಗದಿರುತ್ತಿದ್ದರೆ ವಾಲಿ ಅವನನ್ನು ಕೊಂದೇಬಿಡುತ್ತಿದ್ದ. ಆಮೇಲೆ ಸುಗ್ರೀವನ ಹೆಂಡತಿಯನ್ನು ಕೂಡಾ ತನ್ನ ಹೆಂಡತಿಯನ್ನಾಗಿ ಮಾಡಿಕೊಂಡನಾ ವಾಲಿ. ಸುಗ್ರೀವನು ಹೆಂಡತಿಯನ್ನೂ, ಸರ್ವಸ್ವವನ್ನೂ ಕಳೆದುಕೊಂಡುದು ಮಾತ್ರವಲ್ಲದೆ, ತುಂಬ ಕಷ್ಟಗಳ ಪಾಲಿಗೆ ಬಿದ್ದು, ವಾಲಿಯ ಭಯದಿಂದ ಬೇರೆಲ್ಲಿ ಹೋದರೂ ಉಳಿಗಾಲವಿಲ್ಲವೆಂದು ಭಾವಿಸಿ, ಋಷ್ಯಮೂಕ ಪರ್ವತದ ಮೇಲೆ ಬದುಕಿಕೊಂಡಿದ್ದನು. ಈ ವನವಾಸದಲ್ಲಿ ಸುಗ್ರೀವನೊಂದಿಗೆ ಹನುಮಂತ, ಜಾಂಬವಂತ, ಮೈಂದ, ಧ್ವಿವಿಧ ಎಂಬ ನಾಲ್ಕು ಮಂದಿ ವಾನರರು ಅವನ ಮಂತ್ರಿಗಳಾಗಿದ್ದರು.

ಹೀಗೆ ಸುಗ್ರೀವನೊಂದಿಗಿದ್ದ ಕಾಲದಲ್ಲಿಯೇ ಹನುಮಂತನಿಗೆ ರಾಮಲಕ್ಷ್ಮಣರ ಪರಿಚಯ ಭಾಗ್ಯವುಂಟಾಯಿತು. ಅದು ನಡೆದುದು ಹೀಗೆ:

ಋಷ್ಯಮೂಕದ ಮೇಲಿದ್ದ ಸುಗ್ರೀವನು ಒಂದು ದಿನ, ಪರ್ವತದ ಕೆಳಗೆ ತುಸುದೂರದಲ್ಲಿ ಕಾಣುವ ಪಂಪಾಸರೋವರದ ಬಳಿಯಲ್ಲಿ ಇಬ್ಬರು ಮಾನವೋತ್ತಮರು ಏನನ್ನೋ ಹುಡುಕುವಂತೆ ಸಂಚರಿಸುವುದನ್ನು ನೋಡಿದನು. ಅವರು ಸಾಮಾನ್ಯ ಮಾನವರಂತೆ ಕಾಣದುದರಿಂದಲೇ ಸುಗ್ರೀವನ ಲಕ್ಷ್ಯವನ್ನು ಬಹಳವಾಗಿ ಸೆಳೆದರು. ಅವರಿಬ್ಬರೂ ಧನುರ್ಬಾಣಗಳನ್ನು ಧರಿಸಿ, ನೋಡಲು ಮಹಾವೀರರಾಗಿಯೂ, ಅದ್ಭುತ ಪ್ರಭಾವದವರಾಗಿಯೂ ಕಾಣುತ್ತಿದ್ದರು. ಅವರನ್ನು ನೋಡಿದ ಕೂಡಲೇ ಸುಗ್ರೀವನಿಗೆ ಭಯವಾಯಿತು. ಅವರು ವಾಲಿಯಿಂದ ಕಳುಹಿಸಲ್ಪಟ್ಟ ಮನುಷ್ಯರೇ ಆಗಿರಬೇಕೆಂದೂ, ವಾಲಿ ಋಷ್ಯಮೂಕ ಪರ್ವತದ ಮೇಲೆ ಬರುವಂತಿಲ್ಲವಾದುದರಿಂದ, ತನ್ನನ್ನು ಕೊಲ್ಲಲು ಈ ಹೊಸ ಮಾನವ ವೀರಾಗ್ರಣಿಗಳನ್ನು ಕಳುಹಿಸಿರಬೇಕೆಂದೂ ಸುಗ್ರೀವನಿಗೆ ತೋರಿತು. ಭೀತಿಗೊಂಡ ಅವನು

ಕಾಲು ಸುಟ್ಟ ಬೆಕ್ಕಿನ ಹಾಗೆ ತಿರುಗುತ್ತ, ಎತ್ತಾದರೂ ಓಡಿಹೋಗಬೇಕೆಂದು, ಎಲ್ಲಿಗೆ ಓಡುವುದೆಂದು ತೋರದೆ ತುಂಬ ಇರುಕಾಟದಲ್ಲಿ ಬಿದ್ದ.

ಆಗ ಹನುಮಂತನು ಸುಗ್ರೀವನೊಂದಿಗೆ, "ಹೆದರ ಬೇಡ. ವಾಲಿಯಂತೂ ಇಲ್ಲಿಗೆ ಬರಲಾರ. ಅವನು ಸಮೀಪದಲ್ಲಿರುವ ಸುಳಿವು ಕೂಡಾ ಇಲ್ಲ. ಹಾಗಿರಲು ಈ ಅಪರಿಚಿತರನ್ನು ನೋಡಿ ಹೆದರುವ ಕಾರಣ ವೇನೂ ನನಗೆ ಕಾಣುವುದಿಲ್ಲ" ಎಂದನು.

"ವಾಲಿ ಇಲ್ಲಿಗೆ ಬಂದಿರಬೇಕೆಂದು ನಾನು ಹೇಳ ಲಿಲ್ಲ. ಆ ಇಬ್ಬರು ಮನುಷ್ಯರನ್ನು ಸರಿಯಾಗಿ ನೋಡು. ಅವರ ಹತ್ತಿರವಿರುವ ಧನುರ್ಬಾಣ ಗಳನ್ನೂ ಖಡ್ಗಗಳನ್ನೂ ನೋಡು. ಅವರ ತೋಳು ಗಳನ್ನು ನೋಡು. ಅವರನ್ನು ನೋಡಿದರೆ ಯಾರಿ ಗಾದರೂ ಭಯವಾಗುವಂತಿದೆ. ಅವರನ್ನು ವಾಲಿಯೇ ನನ್ನ ಮೇಲೆ ಕಳುಹಿಸಿರಬೇಕೆಂದು ನನ್ನ ಅನುಮಾನ. ರಾಜನಾಗಿರುವವನಿಗೆ ಎಂತೆಂತಹರೋ ಸಹಾಯಕ ರಾಗಿರುವರು. ನಾವು ಗೂಢಚಾರರನ್ನು ಕುರಿತು ಯೋಚನೆ ಮಾಡದೆ ಇರಲು ಸಾಧ್ಯವಿಲ್ಲ. ಅಲಕ್ಷ್ಯ ವಾಗಿದ್ದರೆ ಸತ್ತುಹೋದೇವು. ರಾಜರು ಶತ್ರುಗಳನ್ನು ನಾಶ ಮಾಡಲು ಅನೇಕ ಬಗೆಯ ಉಪಾಯಗಳನ್ನು ಆಲೋಚಿಸುತ್ತಾರೆ. ಅವರ ಮೇಲೆ ವಾಲಿ ಬಹಳ ಬುದ್ಧಿವಂತ. ಹನುಮಂತಾ, ನೀನು ಉಪಾಯವಾಗಿ ಅವರ ಹತ್ತಿರ ಹೋಗಿ ಅವರು ಆಡಿಕೊಳ್ಳುವ ಮಾತುಗಳನ್ನು ಕೇಳಿ, ಅವರು ಒಳ್ಳೆಯವರೋ ಕೆಡುಕು ಮಾಡುವವರೋ ತಿಳಿದುಕೊಂಡು ಬರು ಬೇಯಾ? ಸಂದರ್ಭ ಬರಿಸಿ ಅವರನ್ನು ಮಾತಾಡಿಸಿ, ಅವರು ಅರಣ್ಯದಲ್ಲಿ ಆಯುಧಗಳನ್ನು ಧರಿಸಿಕೊಂಡು ಏಕೆ ತಿರುಗುತ್ತಿದ್ದಾರೆಂಬುದನ್ನು ತಿಳಿ. ಅವರಿಗೆ ನನ್ನ ಮೇಲೆ ಏನಾದರೂ ದ್ವೇಷಭಾವವಿದ್ದರೆ, ಅದನ್ನು ಹೋಗಲಾಡಿಸಿ, ನನ್ನ ಮೇಲೆ ಅವರಿಗೆ ಒಳ್ಳೆಯ ಭಾವ ಬರುವಂತೆ ಮಾಡು" ಎಂದನು ಸುಗ್ರೀವ.



ಹಾಗೆಯೇ ಮಾಡುವೆನೆಂದು ಹೇಳಿ ಹನುಮಂತನು ರಾಮಲಕ್ಷ್ಮಣರು ಸಂಚರಿಸುತ್ತಿರುವ ಸ್ಥಳಕ್ಕೆ ಹೊರ ಟನು. ಆಗ ಅವನು ತನ್ನ ವಾನರ ರೂಪವನ್ನು ಬಿಟ್ಟು, ಒಬ್ಬ ಬ್ರಹ್ಮಚಾರಿಯ ರೂಪವನ್ನು ಧರಿಸಿ ರಾಮಲಕ್ಷ್ಮಣರ ಸಮೀಪ ಹೋಗಿ, ಅವರಿಗೆ ಬಹಳ ವಿನಯದಿಂದ ಕೈಮುಗಿದು, "ಅಯ್ಯಗಳಿರಾ, ನಿಮ್ಮನ್ನು ನೋಡಿದರೆ ರಾಜರ್ಷಿಗಳ ಹಾಗೂ ಕಾಣು ವಿರಿ; ದೇವತೆಗಳಿಗೆ ಸಮಾನರಾಗಿಯೂ ಇರುವಿರಿ; ತಪೋವ್ರತಗಳಿಂದ ಪುನೀತರಾಗಿಯೂ ತೋರುವಿರಿ. ನೀವು ಈ ಪಂಪಾ ಸರೋವರ ತೀರಕ್ಕೆ ಹೇಗೆ ಬಂದಿರಿ? ನಿಮ್ಮನ್ನು ನೋಡಿ ಇಲ್ಲಿಯ ವನ್ಯಮೃಗ ಗಳು ಹೆದರಿ ಓಡುತ್ತಿವೆ. ನಿಮ್ಮ ವಿಶಾಲವಾದ ಭುಜಗಳನ್ನೂ, ಆನೆಯ ಸೊಂಡಲಿನಂತಹ ಕೈಗಳನ್ನೂ ನೋಡಿದರೆ, ಸರ್ವಾಭರಣಗಳನ್ನೂ ಧರಿಸಿ ರಾಜ್ಯ ಗಳನ್ನು ಆಳುವವರ ಹಾಗೂ ಕಾಣುತ್ತದೆ. ದಯ ವಿಟ್ಟು ತಿಳಿಸುವಿರಾ?" ಎಂದನು.



ರಾಮಲಕ್ಷ್ಮಣರು ಏನೂ ಮಾತಾಡದಿರುವುದನ್ನು ನೋಡಿ, ಹನುಮಂತನು ಮತ್ತೆ ಹೀಗೆಂದನು:

"ಈ ಪ್ರಾಂತದಲ್ಲಿರುವ ಸುಗ್ರೀವನೆಂಬ ವಾನರ ರಾಜನು ತುಂಬ ಧರ್ಮಾತ್ಮ, ದೊಡ್ಡ ಬಲಶಾಲಿ. ಆದರೆ ಅವನನ್ನು ಅವನ ಅಣ್ಣ ಮನೆಯಿಂದ ಓಡಿಸಿಬಿಟ್ಟುದರಿಂದ ಅವನೀಗ ಬಹಳ ಕಷ್ಟದಲ್ಲಿ ಸಿಕ್ಕಿಬಿದ್ದಿದ್ದಾನೆ. ನಾನು ಆ ಸುಗ್ರೀವನಿಗೆ ಮಂತ್ರಿಯಾಗಿರುವ ಹನುಮಂತನೆಂಬವನು. ಸುಗ್ರೀವನು ನನ್ನನ್ನು ನಿಮ್ಮ ಬಳಿಗೆ ಕಳುಹಿಸಿದ್ದಾನೆ. ಅವನಿರುವ ಆ ಋಷ್ಯಮೂಕ ಪರ್ವತದಿಂದ ನಾನು ಬಂದೆ. ನಾನು ಕಾಮರೂಪದ ಶಕ್ತಿಯುಳ್ಳ ವಾನರನಾದುದರಿಂದ, ಈ ಬ್ರಹ್ಮಚಾರಿಯ ವೇಷ ಧರಿಸಿ ಬಂದಿದ್ದೇನೆ. ಯಾವ ಲೋಕಕ್ಕಾದರೂ ಹೋಗಿಬರುವ ಶಕ್ತಿ ನನಗಿದೆ. ನಮ್ಮ ಸುಗ್ರೀವನು ನಿಮ್ಮ ಸ್ನೇಹವನ್ನು ಅಪೇಕ್ಷಿಸುತ್ತಾನೆ."

ಈ ಮಾತು ಕೇಳಿದ ಕೂಡಲೇ ಗಂಭೀರವಾಗಿದ್ದ ರಾಮನ ಮುಖವು ಸಂತೋಷದಿಂದ ಅರಳಿತು. ರಾವಣನು ಎತ್ತಿಕೊಂಡು ಹೋದ ತನ್ನ ಪತ್ನಿಯಾದ ಸೀತೆಯನ್ನು ತಿರುಗಿ ಸಂಪಾದಿಸಿಕೊಂಡು ಬರಲು, ಸುಗ್ರೀವನ ಸಹಾಯವನ್ನು ಹೊಂದಬೇಕೆಂದು ಕಬಂಧನೆಂಬವನು ರಾಮನಿಗೆ ಈ ಮೊದಲೇ ಹೇಳಿದ್ದ.

ಅಂತೆಯೇ ರಾಮನು ಲಕ್ಷ್ಮಣನೊಂದಿಗೆ, "ತಮ್ಮಾ, ಹುಡುಕಲು ಹೋದ ಬಳ್ಳಿ ಕಾಲಿಗೆ ಸಿಕ್ಕಿಕೊಂಡ ಹಾಗೆ, ನಾವು ಹುಡುಕಿಕೊಂಡು ಹೊರಟಿರುವ ಸುಗ್ರೀವನೇ ನಮಗಾಗಿ ತನ್ನ ಮಂತ್ರಿಯನ್ನು ಕಳುಹಿಸಿದ್ದಾನೆ. ಇದು ನಮಗೆ ಶುಭ ಸೂಚನೆಯೇ ಸರಿ. ಇವನು ಬಹಳ ಬುದ್ಧಿವಂತನಂತೆ ತೋರುತ್ತಾನೆ. ಮಾತಾಡುತ್ತಿರುವಷ್ಟು ಹೊತ್ತೂ ಇವನ ಮುಖವು ನಿರ್ಮಲವಾಗಿಯೂ ನಿಷ್ಕಪಟವಾಗಿಯೂ ಇದ್ದಿತು. ಇವನೊಂದಿಗೆ ನೀನು ಮಾತಾಡು" ಎಂದನು.

ಆಗ ಲಕ್ಷ್ಮಣನು ಹನುಮಂತನೊಂದಿಗೆ, "ಹೌದು, ಸುಗ್ರೀವನ ವಿಷಯ ನಾವೂ ತಿಳಿದಿದ್ದೇವೆ. ಅವನ ಸುಗುಣಗಳನ್ನೂ ಕೇಳಿದ್ದೇವೆ. ನಾವು ಆ ಸುಗ್ರೀವನನ್ನೇ ಹುಡುಕುತ್ತಾ ಹೀಗೆ ಬಂದೆವು. ನಾವು ಸುಗ್ರೀವನೊಂದಿಗೆ ಸ್ನೇಹ ಮಾಡಿಕೊಳ್ಳುತ್ತೇವೆ. ಆತನ ದರ್ಶನವನ್ನು ಮಾಡಿಸು" ಎಂದನು.

ರಾಮನಿಗೆ ಸುಗ್ರೀವನಿಂದ ಏನೋ ಕೆಲಸವಿದೆ. ಆದುದರಿಂದ ರಾಮನು ಸುಗ್ರೀವನಿಗೆ ಮತ್ತೆ ರಾಜ್ಯವು ಸಿಗುವ ಹಾಗೆ ಮಾಡಲು ಸಹಾಯಕನಾಗಬಹುದು, ಎಂದು ಹನುಮಂತನು ಊಹಿಸಿ ಸಂತೋಷಪಟ್ಟು, "ಮಹಾನುಭಾವರಾದ ನೀವಿಬ್ಬರೂ ಭಯಂಕರವಾದ ಈ ದಂಡಕಾರಣ್ಯಕ್ಕೆ ಏಕೆ ಬಂದಿರಿ? ರಾಜಪರಿವಾರಗಳೊಂದಿಗಿರಬೇಕಾದ ನೀವು ಇಂತಹ ಸ್ಥಳದಲ್ಲಿ ಹೀಗೆ ಬಂದಿರುವುದು ಆಶ್ಚರ್ಯವಾಗಿದೆ. ತಿಳಿಸಬಹುದಾದರೆ ತಿಳಿಸಬೇಕು" ಎಂದ ವಿನಯದಿಂದ

ರಾಮನು ಲಕ್ಷ್ಮಣನಿಗೆ ತಮ್ಮ ವೃತ್ತಾಂತವನ್ನು ಹೇಳುವಂತೆ ಹೇಳಿದನು. ಲಕ್ಷ್ಮಣನು ಹೀಗೆಂದ: "ಈತನು ಅಯೋಧ್ಯಾ ನಗರವನ್ನಾಳುವ ದಶರಥ

ಮಹಾರಾಜನ ಹಿರಿಯ ಮಗ ರಾಮ. ಈತನು ರಾಜನಾಗಿರಬೇಕಾದವನು. ತಂದೆಯ ಮಾತನ್ನು ಜವೆ ದಾಟದ ಗುಣದವನು. ಅಂತಹ ಮಹಾನುಭಾವನು ರಾಜ್ಯವನ್ನು ತ್ಯಾಗಮಾಡಿ ನನ್ನನ್ನು ಜತೆಗೂಡಿಕೊಂಡು ವನವಾಸ ವ್ರತವನ್ನು ಕೈಕೊಂಡು ಬಂದಿದ್ದಾನೆ. ನಮ್ಮ ಜತೆಯಲ್ಲಿ ಈತನ ಪತ್ನಿ ಸೀತಾದೇವಿ ಕೂಡಾ ವನಕ್ಕೆ ಬಂದಿದ್ದಳು. ನಾನು ಈತನ ತಮ್ಮ ಲಕ್ಷ್ಮಣ. ಈ ರಾಮನ ದೊಡ್ಡ ಗುಣಗಳಿಗೆ ನಾನು ಪರಮದಾಸ. ನಾವು ಪರ್ಣಶಾಲೆಯಲ್ಲಿಲ್ಲದ ವೇಳೆಯಲ್ಲಿ ಯಾವನೋ ರಾಕ್ಷಸನೊಬ್ಬ ಇವನ ಪತ್ನಿಯನ್ನು ಅಪಹರಿಸಿಕೊಂಡು ಹೋದನು. ಆ ರಾಕ್ಷಸನ ಜಾಡು ಸುಗ್ರೀವನ ಮೂಲಕವಾಗಿ ತಿಳಿಯಬರುವುದೆಂದು ಮತ್ತೊಬ್ಬ ರಾಕ್ಷಸನು ನಮಗೆ ಹೇಳಿದ್ದಾನೆ. ನೀನಾಗಿ ಕೇಳಿದುದ ರಿಂದ ನಮ್ಮ ಸಮಾಚಾರವನ್ನು ಇದ್ದುದಿದ್ದ ಹಾಗೆ ಹೇಳಿದ್ದೇವೆ. ಎಂತಹರಿಗಾದರೂ ಶರಣಾಗತಕ್ಕೆ ಆಶ್ರಯದವನಾದ ಈ ಮಹಾಪುರುಷನು, ಈಗ ಸುಗ್ರೀವನಿಗೆ ಶರಣು ಹೋಗುವ ತವಕದಲ್ಲಿದ್ದಾನೆ. ಸುಗ್ರೀವನು ಅನುಗ್ರಹಿಸಬೇಕು. ಆತನ ದರ್ಶನದಿಂದ ನಮಗೆ ಮೇಲಾಗುವುದೆಂಬ ನಂಬುಗೆಯಲ್ಲಿದ್ದೇವೆ"

ಈ ಮಾತಿಗೆ ತಲೆದೂಗಿ ಹನುಮಂತನು, "ನಿಜ ನೋಡಿದರೆ ನಮ್ಮ ರಾಜ ಸುಗ್ರೀವನೇ ನಿಮ್ಮನ್ನು ಹುಡುಕಿಕೊಂಡು ಬರಬೇಕಾದ ಪರಿಸ್ಥಿತಿಯಿದು. ತನ್ನ ರಾಜ್ಯವನ್ನೂ ಹೆಂಡತಿಯನ್ನೂ ಅಣ್ಣನಾದ ವಾಲಿ ಅಪಹರಿಸಿಕೊಂಡುದರಿಂದ ಆತನು ತುಂಬ ದುಃಖಿಕರ ವಾದ ಸ್ಥಿತಿಯಲ್ಲಿದ್ದಾನೆ. ಸೀತಾದೇವಿಯನ್ನು ಹುಡು ಕಲು ಆತನು ನಿಮಗೆ ಸಹಾಯ ಮಾಡಬಲ್ಲನೆಂದು ನಾನು ಭರವಸೆಯಾಗಿ ಹೇಳಬಲ್ಲೆ. ನಿಮ್ಮ ದರ್ಶನ ದಿಂದ ಆತನ ಕಷ್ಟಗಳೂ ಪರಿಹಾರವಾಗ ಬಹುದು" ಎಂದನು.

ತರುವಾಯ ಹನುಮಂತನು ಶಿರಬಾಗಿ, "ಹೀಗೆ ದಯಮಾಡಬೇಕು" ಎನ್ನಲು, ರಾಮನೊಂದಿಗೆ



ಲಕ್ಷ್ಮಣನು, "ಹಾಗಾದರೆ ನಾವು ಸುಗ್ರೀವನ ಬಳಿಗೆ ಹೋಗೋಣ. ಅವನಿಂದ ನಿನ್ನ ಕಾರ್ಯವು ನೆರ ವೇರುವುದರಲ್ಲಿ ಸಂದೇಹವಿರದೆಂದು ನನಗೆ ಕಾಣು ತ್ತದೆ" ಎಂದನು.

ಕೂಡಲೇ ಹನುಮಂತನು ತನ್ನ ಬ್ರಹ್ಮಚಾರೀ ರೂಪವನ್ನು ಬಿಟ್ಟು ವಾನರರೂಪವನ್ನು ಧರಿಸಿ, ರಾಮ ಲಕ್ಷ್ಮಣರನ್ನು ತನ್ನ ಭುಜಗಳ ಮೇಲೆ ಏರಿಸಿಕೊಂಡು, ಋಷ್ಯಮೂಕ ಪರ್ವತದ ಮೇಲೆ ಹೋದನು. ಅಲ್ಲಿ ನೋಡಿದಾಗ ಸುಗ್ರೀವನು ಋಷ್ಯಮೂಕ ಪರ್ವತದ ಮೇಲೆ ಕಾಣಲಿಲ್ಲ. ಭಯದಿಂದ ಅವನು ಸಮೀಪದಲ್ಲಿದ್ದ ಮಲಯ ಪರ್ವತದ ಮೇಲೆ ಅಡಗಿ ಕೊಂಡಿದ್ದನೆಂದು ತಿಳಿಯಿತು.

ಹನುಮಂತನು ಮಲಯ ಪರ್ವತದ ಮೇಲಿದ್ದ ಸುಗ್ರೀವನನ್ನು ನೋಡಿ, "ಆ ಬಂದವರಿಂದ ಭಯವೇ ನಿಲ್ಲ. ಅವರು ರಾಮಲಕ್ಷ್ಮಣರೆಂಬವರು. ಇಕ್ಷ್ವಾಕು ವಂಶದಲ್ಲಿ ಹುಟ್ಟಿದವರು. ದಶರಥ ಮಹಾರಾಜನ



3



ಕುಮಾರರು. ರಾಮನು ನ್ಯಾಯ ಧರ್ಮಗಳನ್ನು ಪಾಲಿಸಿ ತಂದೆಯ ಮಾತಿನಂತೆ ಅರಣ್ಯವಾಸಕ್ಕೆ ಬಂದವನು. ಆತನ ಹೆಂಡತಿಯನ್ನು ಯಾವನೋ ರಾಕ್ಷಸನು ಎತ್ತಿಕೊಂಡು ಹೋದನಂತೆ. ಆದುದರಿಂದ ಆ ರಾಮನು ನಿನಗೆ ಶರಣಾಗಲು ಬಂದಿದ್ದಾನೆ. ಅಣ್ಣ ತಮ್ಮಂದಿರಾದ ರಾಮಲಕ್ಷ್ಮಣರು ನಿನ್ನ ಸ್ನೇಹವನ್ನು ಕೋರುತ್ತಿದ್ದಾರೆ. ಇವರನ್ನು ಕರೆದು ಆದರಿಸಿ ಮಾತನಾಡಿಸುವುದರಿಂದ ಮೇಲುಂಟು. ಏನೂ ಶಂಕಿಸಬೇಡ. ತ್ವರೆ ಮಾಡು" ಎಂದನು.

ಹನುಮಂತನ ಮಾತುಗಳು ಸುಗ್ರೀವನ ಮನಸ್ಸಿಗೆ ಅಮೃತ ಧಾರೆಯಂತಾಯಿತು. ಅವನು ಅತ್ಯಂತ ಸಂತೋಷದಿಂದ ಸುಂದರ ಮಾನವನ ರೂಪ ಧರಿಸಿ ರಾಮಲಕ್ಷ್ಮಣರ ಬಳಿಗೆ ಬಂದು, "ಬನ್ನಿ. ನಿಮ್ಮನ್ನು ಕುರಿತು ಹನುಮಂತನು ನನ್ನೊಂದಿಗೆ ಎಲ್ಲವನ್ನೂ ಹೇಳಿದ್ದಾನೆ. ಮಹಾರಾಜನಾದ ರಾಮಾ! ನೀನು ನನ್ನಂತಹ ವಾನರನ ಸ್ನೇಹ ಬಯಸುವಿಯೆಂದು ತಿಳಿದು, ಅದು ನನಗೆ ಬಹಳ ಗೌರವದಾಯಕವೆನಿಸಿದೆ; ಲಾಭದಾಯಕವೂ ಆಗಿದೆ. ನಿನಗೆ ನನ್ನ ಸ್ನೇಹವನ್ನು ಅಗತ್ಯವಾಗಿ ಕೊಡುತ್ತೇನೆ. ದಯವಿಟ್ಟು ನೀನು ಕೂಡಾ ನನ್ನ ಕೈಯಲ್ಲಿ ಕೈಯನ್ನಿಟ್ಟು ಸ್ನೇಹ ಧರ್ಮವನ್ನು ನಿರ್ವಹಿಸಬೇಕು" ಎಂದನು.

ರಾಮನು ಸುಗ್ರೀವನ ಕೈಯಲ್ಲಿ ತನ್ನ ಕೈಯನ್ನು ಹಾಕಿ, ಅವನನ್ನು ಗಾಢವಾಗಿ ಆಲಿಂಗಿಸಿಕೊಂಡನು. ಈ ಪ್ರಸಿದ್ಧ ಸುಯೋಗವನ್ನು ಹೊಂದಿಸಿದ ಹನುಮಂತನು ಅರಣಿಯನ್ನು ಮಥಿಸಿ ಅಗ್ನಿಯನ್ನು ಪ್ರಜ್ವಲಗೊಳಿಸಿ, ಪೂಜಿಸಿ ರಾಮ ಸುಗ್ರೀವರ ಮಧ್ಯದಲ್ಲಿ ಅಣಿಗೊಳಿಸಿದನು. ರಾಮಸುಗ್ರೀವರು ಆ ಅಗ್ನಿಗೆ ಪ್ರದಕ್ಷಿಣೆ ಮಾಡಿ ಅಗ್ನಿ ಸಾಕ್ಷಿಯಾಗಿ ಸಖ್ಯ ಪ್ರಮಾಣ ಮಾಡಿಕೊಂಡರು. ಅನಂತರ ರಾಮನು ಸುಗ್ರೀವನೊಂದಿಗೆ "ಸುಗ್ರೀವ, ನೀನು ನನಗೆ ಸ್ನೇಹಿತನಾದೆ. ಇನ್ನು ಮೇಲೆ ನಿನ್ನ ದುಃಖವು ನನ್ನ ದುಃಖ. ನಿನ್ನ ಸುಖವೇ ನನ್ನ ಸುಖ. ಇದು ನಿಜ" ಎಂದನು.

ಸುಗ್ರೀವನು ದಟ್ಟವಾಗಿ ಎಲೆಗಳು ತುಂಬಿದ ಒಂದು ಕರಿಮರವನ್ನು ಮುರಿದು ಅದರ ಮೇಲೆ ರಾಮನ ಜತೆಯಲ್ಲಿ ಕುಳಿತುಕೊಂಡನು. ಲಕ್ಷ್ಮಣನು ಕುಳಿತುಕೊಳ್ಳಲು ಹನುಮಂತನು ಒಂದು ಚಂದನ ವೃಕ್ಷದ ಕೊಂಬೆಯನ್ನು ಮುರಿದು ಹಾಕಿದನು. ಲಕ್ಷ್ಮಣನು ಅದರ ಮೇಲೆ ಕುಳಿತನು.

ತರುವಾಯ ಸುಗ್ರೀವನು ತನಗೂ ವಾಲಿಗೂ ನಡುವೆ ಹೇಗೆ ವೈರ ಬಂತೆಂಬುದನ್ನು ವಿವರವಾಗಿ ಹೇಳಿದನು. ಎಲ್ಲಾ ಹೇಳಿ ಆದ ಮೇಲೆ ಅವನು ರಾಮನೊಂದಿಗೆ, "ವಾಲಿಯ ಭಯದಿಂದ ನಾನು ಕುಂದಿ ಹೋಗುತ್ತಿದ್ದೇನೆ. ನನ್ನ ಭಯವನ್ನು ನೀನು ತೊಲಗಿಸಬೇಕು" ಎಂದನು.

ರಾಮನು ವಾಲಿ ಸುಗ್ರೀವರ ವೃತ್ತಾಂತವನ್ನೆಲ್ಲ ಕೇಳಿ, ಕಿರುನಗು ನಗುತ್ತ "ಸಂದೇಹಪಡಬೇಡ. ಸ್ನೇಹಕ್ಕೆ ಉಪಕಾರವೇ ಫಲ, ನಿನ್ನ ಮೇಲೆ ಅನ್ಯಾಯ



3

ವೆಸಗಿದ ವಾಲಿಯನ್ನು ನಾನು ಕೊಲ್ಲುವೆನು. ನನ್ನ ಬಾಯಿಯಿಂದ ಹೊರಬಿದ್ದ ಮಾತು ಸುಳ್ಳಾಗುವುದಿಲ್ಲ" ಎಂದನು. ಸುಗ್ರೀವನು ರಾಮನ ಮಾತು ಕೇಳಿ ಬಹಳ ಸಂತೋಷಪಡುತ್ತ, "ರಾಮಾ, ನಿನ್ನ ದಯದಿಂದಲೇ ನನಗೆ ನನ್ನ ಹೆಂಡತಿಯೂ ರಾಜ್ಯವೂ ತಿರುಗಿ ಬರಬೇಕಾಗಿದೆ. ಅದಕ್ಕಾಗಿ ನೀನು ವಾಲಿಯನ್ನು ಕೊಲ್ಲುವ ಪ್ರಯತ್ನ ಮೊದಲು ಮಾಡಿಬಿಡಬೇಕು. ಸೀತಾದೇವಿ ಎಲ್ಲಿದ್ದರೂ ಹುಡುಕಿ ಕರೆತಂದು ನಿನಗೆ ಒಪ್ಪಿಸುವ ಕೆಲಸ ನನ್ನದು. ಆಕೆ ಪಾತಾಳದಲ್ಲೇ ಇರಲಿ, ಸ್ವರ್ಗದಲ್ಲೇ ಇರಲಿ, ನಾನು ಅವಳನ್ನು ಹುಡುಕಿ ತರುವ ಮಾತು ಮಾತ್ರ ನಿಜ. ಈಗ ನನಗೆ ಜ್ಞಾಪಕ ಬರುತ್ತಿದೆ. ನಾನು ನೋಡಿದುದು ಆ ಸೀತೆಯನ್ನೇ ಆಗಿರಬೇಕು: ಆಕೆ ನನ್ನನ್ನೂ ನನ್ನೊಂದಿಗಿರುವ ನಾಲ್ಕು ಮಂದಿ ವಾನರ ವೀರರನ್ನೂ ನೋಡಿ ನಮ್ಮ ಮುಂದೆ ಒಂದು ಆಭರಣಗಳ ಚಿಕ್ಕ ಮೂಟೆಯನ್ನು ಬಿಸುಟಳು. ಅದನ್ನು ಭದ್ರವಾಗಿರಿಸಿದ್ದೇನೆ. ಈಗಲೇ ತರುತ್ತೇನೆ. ಆಭರಣಗಳ ಗುರುತು ಹಿಡಿಯಬಲ್ಲೆಯಾ ನೋಡು" ಎಂದನು.

ರಾಮನು ಆತುರದಿಂದ, "ಮಿತ್ರಾ, ಅವುಗಳನ್ನು ಬೇಗನೇ ತಂದು ತೋರಿಸು" ಎಂದನು. ಕೂಡಲೇ ಸುಗ್ರೀವನು ಎದ್ದು ಒಂದು ಗುಹೆಯೊಳಗೆ ಹೋಗಿ, ಸೀತಾದೇವಿಯ ಸೆರಗಿನ ಬಟ್ಟೆಯ ಹರಿದ ತುಂಡಿನಲ್ಲಿ ಕಟ್ಟಲ್ಪಟ್ಟಿದ್ದ ಮೂಟೆಯನ್ನು ತಂದು ಬಿಚ್ಚಿ ಅದರೊಳಗಿರುವ ಸುಂದರವಾದ ಆಭರಣಗಳನ್ನು ರಾಮನ ಮುಂದೆ ತೆಗೆದಿಟ್ಟು "ನೋಡು" ಎಂದನು.

ರಾಮನು ಅವುಗಳನ್ನು ನೋಡಿದ ಕೂಡಲೇ "ಹಾ! ಸೀತಾ!" ಎಂದು ಪ್ರಲಾಪಿಸಿ ಹಿಂದಕ್ಕೊರಗಿ ಕಣ್ಣೀರು ಸುರಿಸುತ್ತ ನಿಟ್ಟುಸಿರು ಬಿಡತೊಡಗಿದನು. ಬಳಿಕ ಅವನು ಲಕ್ಷ್ಮಣನೊಂದಿಗೆ, "ಲಕ್ಷ್ಮಣಾ, ರಾಕ್ಷಸನು ತನ್ನನ್ನು ಎತ್ತಿಕೊಂಡು ಹೋಗುವಾಗ, ಸೀತೆ ಈ ಆಭರಣಗಳನ್ನು ಮೆತ್ತಗಿನ ಹುಲ್ಲು ನೆಲದಲ್ಲಿ ಹಾಕಿರಬೇಕು. ಆದುದರಿಂದಲೇ ಇವು ಒಂದಿಷ್ಟೂ ಕೆಡಲಿಲ್ಲ. ಎಲ್ಲವೂ ಅವಳ ಶರೀರದಲ್ಲಿ ಹೇಗಿದ್ದುವೋ ಹಾಗೆಯೇ ಇವೆ" ಎಂದನು.

ಆಗ ಲಕ್ಷ್ಮಣನು ರಾಮನೊಂದಿಗೆ, "ಈ ಕೇಯೂರಗಳನ್ನೂ ಕುಂಡಲಗಳನ್ನೂ ನಾನು ಗುರುತಿಸಲಾರೆನಣ್ಣಾ. ಇಗೋ ಸೀತೆಯ ಕಾಲಿಗೆ ದಿನಾ ನಮಸ್ಕಾರ ಮಾಡುವಾಗ ಕಾಣಿಸುವ ಈ ಅಂದುಗೆಗಳನ್ನು ಗುರುತಿಸಬಲ್ಲೆ. ಶುಭಸೂಚನೆಯಣ್ಣಾ. ಇವು ಆಕೆಯದೇ" ಎಂದನು.

ರಾಮನು ದೀನನಾಗಿ ಸುಗ್ರೀವನೊಂದಿಗೆ, "ಮಿತ್ರಾ, ನೀನು ನೋಡುವಾಗ ಆ ರಾಕ್ಷಸನು ಸೀತೆಯನ್ನು ಯಾವ ಕಡೆಗೆ ಎತ್ತಿಕೊಂಡು ಹೋದನು?" ಎಂದು ಗದ್ಗದ ಕಂಠದಿಂದ ಕೇಳಿದ.

